# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಕಳ್ಳತನವೆಂಬುದು ನ್ಯಾಯರೀತಿಯಾಗಿ ಶಿಕ್ಷಿಸಲ್ಪಡಬೇಕಾದ ತಪ್ಪು ಎಂಬುದು ಎಲ್ಲರಿಗೂ ಗೊತ್ತಿದೆ. ಕಳ್ಳನಿಗೂ ಗೊತ್ತಿರುವುದರಿಂದಲೇ ಯಾರಿಗೂ ತಿಳಿಯದಂತೆ ಆ ಕೆಲಸ ಮಾಡುತ್ತಾನೆ. ಸಮಾಜ ದೃಷ್ಟಿಯಲ್ಲಿಯೂ ಅದು ಅನೀತಿಯಾದುದರಿಂದ ಅವನ ಮೇಲೆ ಯಾರೂ ಸಹಾನುಭೂತಿ ತೋರಿಸುವುದಿಲ್ಲ. "ವೃದ್ಧನ ಬುದ್ಧಿ" ಎಂಬ ಕಥೆಯಲ್ಲಿ ಮುದುಕನ ಪ್ರತ್ಯುತ್ಪನ್ನಮತಿಯ ಯುಕ್ತಿಯ ಮಾತಿನಿಂದ ಕಳ್ಳನ ವಿವೇಕ ಜಾಗ್ರವಾಗುತ್ತದೆ.

## ಅಮರವಾಣಿ

**ವಿದ್ಯಾ ಅನೇಕಾ ಲಬ್ಧ್ವಾನೀ ಖಲೋನಾಪ್ನೋತಿ ಗೌರವಮ್**
**ವಹನ್ನಪಿ ಬಹುನ್ಯರ್ಥಂ ಖರಃ ಪ್ರಾಪ್ನೋತ್ಯ ಗೌರವಮ್**

ಬಂಗಾರವನ್ನು ಹೊತ್ತುಕೊಂಡ ಮಾತ್ರದಿಂದ ಕತ್ತೆಗೆ ಗೌರವ ಬರುವುದಿಲ್ಲ ಹೇಗೋ ಹಾಗೆ, ಎಷ್ಟು ವಿದ್ಯೆಗಳನ್ನು ಕಲಿತರೂ ದುಷ್ಟನಿಗೆ ನಾಲ್ವರ ನಡುವೆ ಗೌರವವೇನೂ ಇರದು.

ಸಂಪುಟ : ೭೩ ಅಕ್ಟೋಬರ್ '೮೪ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



## ಚಂದಮಾಮನ ಹರಟೆ



### ಸಿಗರೆಟ್‌ಗಳಿಂದಾಗುವ ಅಪಾಯ

ಸಿಗರೆಟ್ ಸೇದುವುದರಿಂದ ಬರುವ ಕ್ಯಾನ್ಸರಿನ ಕಾರಣದಿಂದ ಪ್ರಪಂಚದಲ್ಲಿ ವರ್ಷಕ್ಕೆ ೪೩ ಲಕ್ಷ ಜನರು ಪ್ರಾಣ ಕಳೆದುಕೊಳ್ಳುತ್ತಾರೆ. ಇಂತಹ ಮರಣಗಳು ಏಸಿಯಾ ಖಂಡದಲ್ಲಿ ಅತೀ ಹೆಚ್ಚಾಗಿವೆ.

### ಭಯಾನಕವಾದ ‘ ಪ್ರಾಣಿ ’ !

ಪ್ರಾಣಿಗಳೊಳಗೆಲ್ಲಾ ಅತಿ ಭಯಂಕರವಾದ ಪ್ರಾಣಿ ಮನುಷ್ಯನೇ ಎನ್ನುತ್ತಾನೆ, ಆಸ್ಟ್ರೇಲಿಯಾಕ್ಕೆ ಸೇರಿದ ಸುಪ್ರಸಿದ್ಧ ನಾಟಕದರ್ಶಕ ಮೈಕ್‌ಮುಲ್ಲಿನ್ಸ್. ಮನುಷ್ಯನು ಸೃಷ್ಟಿಸುವ ಅಣು ಬಾಂಬುಗಳು, ವಾತಾವರಣ ಕಾಲುಷ್ಯವು ಯಾವತ್ತೂ ಪ್ರಪಂಚವನ್ನು ಸರ್ವನಾಶನ ಮಾಡಬಲ್ಲುವೆಂದು ಮುಲ್ಲಿನ್ಸ್ ಅಭಿಪ್ರಾಯ ಪಡುತ್ತಾನೆ. ಆತನು ಸಿಡ್ನೀ ಪ್ರಾಣಿ ಪ್ರದರ್ಶನ ಶಾಲೆಯಲ್ಲಿ ಇಪ್ಪತ್ತೊಂದು ದಿನಗಳವರೆಗೆ ಒಂದು ಬೋನಿನೊಳಗಿದ್ದು, ತನ್ನ ಮುಂದೆ “ ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚು ಭಯಂಕರವಾದ ಮೃಗ ” ಎಂದು ಬೋರ್ಡು ಬರೆಯಿಸಿ ಇಟ್ಟುಕೊಂಡಿದ್ದ.





### ಹಾಡು ಕಲಿತ ಕಂಪ್ಯೂಟರ್

ಪಿಲಾನಿಯಲ್ಲಿ ಬಿರ್ಲಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಹಾಡಿನ ವಿಷಯ ಸರ್ವವೂ ತಿಳಿದ ಒಂದು ಕಂಪ್ಯೂಟರ್ ಇದೆ. ನಾವು ಒಂದು ರಾಗದ ಹೆಸರು ಹೇಳಿದರೆ ಸಾಕು. ಈ ಕಂಪ್ಯೂಟರ್ ಆ ರಾಗದಲ್ಲಿ ಹಾಡಲ್ಪಟ್ಟ ಸಿನಿಮಾ ಹಾಡುಗಳ ಪೂರ್ತಿ ಪಟ್ಟಿಯನ್ನು ಕ್ಷಣ ಮಾತ್ರದಲ್ಲಿ ನಮಗೆ ಕೊಡುತ್ತದೆ.

## ನಿಮಗೆ ಗೊತ್ತೇ?

೧. ರೆಡ್‌ಕ್ರಾಸ್ ಸೊಸೈಟೀ (೧೮೬೪) ಯನ್ನು ಸ್ಥಾಪಿಸಿದವರಾರೆಂದು ನಿಮಗೆ ಗೊತ್ತಾ ?

೨. ಮೊತ್ತ ಮೊದಲು ಗಗನ ಪಥದಲ್ಲಿ ನಡೆದವರ್‍ಯಾರು ?

೩. ದಕ್ಷಿಣ ಧ್ರುವವನ್ನು ಮೊತ್ತ ಮೊದಲು ತಲಪಿದವರಾರೆಂದು ನಿಮಗೆ ತಿಳಿದಿದೆಯೆ ?

೪. ಐಕ್ಯರಾಜ್ಯ ಸಮಿತಿಯ ಮೊದಲನೇ ಕಾರ್ಯದರ್ಶಿ ಯಾರು ?

೫. ಪ್ರಪಂಚದ ಮತಗಳ ಮೊದಲನೇ ಸಮಾವೇಶದಲ್ಲಿ ಉಪನ್ಯಾಸ ಮಾಡಿದ ಭಾರತೀಯನು ಯಾರೆಂದು ನಿಮಗೆ ಗೊತ್ತೇ ?

(ಉತ್ತರ ೬೪ ನೇ ಪುಟದಲ್ಲಿ)



# ವೃದ್ಧನ ಬುದ್ಧಿ

ಒಂದು ಊರಿನಲ್ಲಿ ವೆಂಕಟಾಚಲಯ್ಯನೆಂಬವನು ದೊಡ್ಡ ಆಸ್ತಿವಂತನಾಗಿದ್ದನು. ಒಂದು ದಿನ ಅರ್ಧ ರಾತ್ರಿಯ ಹೊತ್ತಿನಲ್ಲಿ ಮನೆಯವರೆಲ್ಲ ಗಾಢ ನಿದ್ರೆಯಲ್ಲಿರುವಾಗ ಕಳ್ಳನೊಬ್ಬನು ಆತನ ಮನೆಯೊಳಗೆ ಹೊಕ್ಕನು. ಅವನು ಶಯನಾಗಾರದೊಳಗೆ ಪ್ರವೇಶಿಸಿ, ತನ್ನ ಸಾಧನಗಳಿಂದ ಕಬ್ಬಿಣದ ಪೆಟ್ಟಿಗೆಯನ್ನೂ ತೆರೆದು ಅದರೊಳಗಿದ್ದ ನಗ ನಾಣ್ಯಗಳೆಲ್ಲವನ್ನೂ ಗಂಟುಕಟ್ಟಿ, ಹೊರಟು ಹೋಗುವ ಸಮಯಕ್ಕೆ ಕಾಲಿಗೆ ಏನೋ ತಗಲಿ ದೊಡ್ಡ ಶಬ್ದವಾಯಿತು. ಅದರಿಂದ ವೆಂಕಟಾಚಲಯ್ಯ ಬೆಚ್ಚಿಬಿದ್ದು ಎದ್ದುಬಿಟ್ಟನು.

ಕಳ್ಳನು ಅವನಿಗೆ ಕತ್ತಿಯನ್ನು ತೋರಿಸಿ, "ಕೂಗಿದರೆ ಎಚ್ಚರ" ಎಂದು ಕೊಂದುಬಿಡುವ ಅರ್ಥ ಸೂಚಿಸಿದನು.

ಭೀತಿಯಿಂದ ವೆಂಕಟಾಚಲಯ್ಯನ ಬಾಯಿಯಿಂದ ಸ್ವರವೇ ಹೊರಡಲಿಲ್ಲ. ಕಳ್ಳನು ಮರುಕ್ಷಣದಲ್ಲೇ ಗಂಟಿನೊಂದಿಗೆ ಓಡಿ ಹೋಗಿಬಿಟ್ಟನು. ಆಮೇಲೆ ವೆಂಕಟಾಚಲಯ್ಯ ಮಂಚದಿಂದಿಳಿದು "ಕಳ್ಳಾ ! ಕಳ್ಳಾ" ಎಂದು ದೊಡ್ಡ ಶಬ್ದದಿಂದ ಕೂಗಿದನು.

ಆ ಕೂಗನ್ನು ಕೇಳಿ ಮನೆಯೊಳಗಿನವರೆಲ್ಲಾ ಎದ್ದರು. ನೆರೆಹೊರೆಯವರೂ ಎದ್ದು ಓಡೋಡಿ ಬಂದರು. ಹೀಗೆಲ್ಲಾ ಆಗುತ್ತದೆಂದು ಕಳ್ಳನಿಗೆ ಗೊತ್ತೇ ಇತ್ತು. ಆದುದರಿಂದ ಅವನು ವೆಂಕಟಾಚಲಯ್ಯನ ಮನೆಯ ಆವರಣದ ಗೋಡೆಯನ್ನು ಹಾರಿದ ಮೇಲೆ, ಸ್ವಲ್ಪ ಹೊತ್ತು ಬೀದಿಯಲ್ಲಿ ಓಡಿ ಪಕ್ಕದಲ್ಲಿದ್ದೊಂದು ಮನೆಯ ಅರ್ಧತೆರೆದ ಬಾಗಿಲಿನ ಮೂಲಕ ಒಳಗೆ ಪ್ರವೇಶಿಸಿದನು. ಕಳ್ಳನಾದುದರಿಂದ ಸುಮ್ಮನಿರದೆ ಆ ಮನೆಯೊಳಗೂ ಏನಾದರೂ ಕಳವುಮಾಡಲು ಸಿಗುವುದೇನೋ ಎಂದುಕೊಂಡು, ಅವನು ಮಲಗುವ ಕೋಣೆಯೊಳಗೆ ಹೋದನು. ಕೋಣೆಯೊಳಗೆ ಇನ್ನೂ ಮಂದವಾಗಿ ದೀಪ ಉರಿಯುತ್ತಿದ್ದಿತು.

ಮಂಚದ ಮೇಲೆ ಒಬ್ಬ ಮುದುಕನು ಕುಳಿತುಕೊಂಡಿದ್ದನು. ಆ ಮುದುಕ ಬಾಗಿಲ ಕಡೆಗೇ ನೋಡಿಕೊಂಡಿದ್ದನು.

ಕಳ್ಳನ ಒಂದು ಕೈಯಲ್ಲಿ ಧನದ ಗಂಟು ಇದ್ದಿತು. ಎರಡನೇ ಕೈಯಲ್ಲಿ ಸೊಂಟದಲ್ಲಿದ್ದ ಕತ್ತಿಯನ್ನು ಎಳೆದುಕೊಂಡನು. ಆದರೂ ಮುದುಕನು ದ್ವಾರ



ವನ್ನೇ ನೋಡಿಕೊಂಡಿದ್ದನು. ಕಳ್ಳನು ಮತ್ತಷ್ಟು ಹತ್ತಿರ ಹೋದಾಗ, "ಹೆಜ್ಜೆಗಳ ಸಪ್ಪಳ ಕೇಳುತ್ತಿದೆ. ಈಗ ಬಂದೆಯೇನೋ ಹುಡುಗಾ ? ಎಷ್ಟು ಹೊತ್ತು ನಿನ್ನ ದಾರೀ ನೋಡುವದಪ್ಪಾ ! ಎಲ್ಲಿದ್ದೆ ಇಷ್ಟು ಹೊತ್ತು ? " ಎಂದನು ಮುದುಕ.

ಈ ವೃದ್ಧನು ಕುರುಡನೆಂದು ಈಗ ಕಳ್ಳನಿಗೆ ಅರ್ಥವಾಯಿತು. ಅವನು ಕತ್ತಿಯನ್ನು ಕೂಡಲೇ ಸೊಂಟಕ್ಕೆ ಸುರುಗಿಕೊಂಡು, "ಅಲ್ಲರೀ. ನಾನು ನಿಮ್ಮ ಹುಡುಗನಲ್ಲ ! ನಿಮ್ಮವನ ಸ್ನೇಹಿತ ! ಅವನೇ ನನ್ನ ಕಳಿಸಿದ್ದು " ಎಂದನು.

"ಅವನಿನ್ನೂ ಬರಲಿಲ್ಲವೇ ? ಪಾನಶಾಲೇಲೀ ಬಿದ್ದುಕೊಂಡಿದ್ದಾನೇನು ? " ಎಂದು ಬೇಸರದಿಂದ ಕೇಳಿದನು ಮುದುಕ.

ಈ ಮುದುಕನಿಗೆ ಒಬ್ಬ ಮಗನೋ, ಮೊಮ್ಮಗನೋ ಇರುವನೆಂದೂ, ಅವನು ದಿನಾ ಪಾನಶಾಲೆಗೆ ಹೋಗಿ ಕುಡಿದು ತಡವಾಗಿ ಮನೆಗೆ ಬರುವನೆಂದೂ, ವೃದ್ಧನು ನಿದ್ದೆ ಮಾಡದೆ ಅವನ ದಾರೀ ಕಾಯುತ್ತಿರುವನೆಂದೂ ಕಳ್ಳನು ತಿಳಿದುಕೊಂಡನು.

"ಅವನು ಈ ರಾತ್ರಿ ಮನೆಗೆ ಬರುವುದಿಲ್ಲವಂತೆರೀ. ಈ ಸಮಾಚಾರ ನಿಮಗೆ ಹೇಳಲಿಕ್ಕೇ ಬಂದಿದ್ದೇನೆ. ಸ್ವಲ್ಪ ನೀರು ಕುಡಿದು ಹೋಗುತ್ತೇನೆ." ಎಂದನು ಕಳ್ಳ.

"ಅವನೊಬ್ಬ ಯಾವಾಗಲೂ ಹೀಗೇನೇ. ಅವನಿಗಾಗಿ ಎದುರುನೋಡಿ ಪ್ರಯೋಜನವಿಲ್ಲ. ನಾನಿನ್ನು ಮಲಗುತ್ತೇನೆ. ನೀರು ಪಕ್ಕದ ಕೋಣೆಯಲ್ಲಿದೆ. ಕುಡಿದು ಹೋಗು." ಎಂದು ಹೇಳಿ ಮುದುಕನು ಮಂಚದಲ್ಲಿ ಮೈಚಾಚಿಕೊಂಡನು.

ಕಳ್ಳನಿಗೆ ತಪ್ಪಿಸಿಕೊಳ್ಳಲು ಇದೇ ಒಳ್ಳೆಯ ಸಮಯವೆಂದು ತೋರಿತು. ಗಂಟನ್ನೊಂದಿಗೆ ಬೀದಿಗೆ ಹೋದರೆ ಯಾರಾದರೂ ಹಿಡಿಯುವ ಸಂಭವವಿದ್ದುದರಿಂದ ಆ ಗಂಟನ್ನೂ, ಕತ್ತಿಯನ್ನೂ ಮುದುಕನ ಮಲಗುವ ಕೋಣೆಯ ಮೂಲೆಯಲ್ಲಿ ಅಡಗಿಸಿಟ್ಟು, ಅಲ್ಲಿಯೇ ಗೋಡೆಗೆ ತಗಲಿಸಿದ್ದ ಶುಭ್ರವಾದ ಪಂಚೆಯನ್ನೂ, ಅಂಗಿಯನ್ನೂ ಧರಿಸಿಕೊಂಡನು. ಅವನು ಈಗ ಕಳ್ಳನ ಹಾಗಿರಲಿಲ್ಲ. ಸಭ್ಯ ಗೃಹಸ್ಥನ ಹಾಗಿದ್ದನು.

"ಏನು ಮಾಡುವಿಯಪ್ಪಾ ? ನೀರು ಕುಡಿದೆಯಾ ? " ಎಂದನು ಮುದುಕ.

"ಬಟ್ಟೆ ಸರಿಯಾಗಿ ಕಟ್ಟಿಕೊಳ್ಳುತ್ತಾ ಇದ್ದೇನೆ. ನೀರು ಕುಡಿದಾಯಿತು. ನೀವು ಸ್ವಲ್ಪ ನನ್ನ ಹಿಂದೆ ಬಂದು ಬಾಗಿಲು ಹಾಕ್ಕೊಂಡುಬಿಡಿ, ನಾನು ಹೋಗುತ್ತಿದ್ದೇನೆ " ಎಂದನು ಕಳ್ಳ.

"ಬಾಗಿಲು ಹಾಕಿಕೊಳ್ಳಬೇಕಾದ ಅಗತ್ಯವೇನೂ ಇಲ್ಲಪ್ಪ. ನನಗೆ ಒಂದೊಂದುಸಾರಿ ನಿದ್ದೆಬಂದರೆ ಎಷ್ಟು ಕೂಗಿದರೂ ಎಚ್ಚರಾಗದು. ಹುಡುಗ ಬೆಳಂಜಾಮಕ್ಕೆ ಬಂದಾನು, ಬಾಗಿಲು ಹಾಗೇ ಇರಲಿ ಬಿಡು" ಎಂದನು ಮುದುಕ ಮಂಚದಿಂದ ಏಳದೆಯೇ.

"ಹೀಗೆ ಬಾಗಿಲು ತೆರೆದೇ ಇದ್ದರೆ ಯಾವ ಕಳ್ಳ ನಾದರೂ ಮನೆಯೊಳಗೆ ಹೊಕ್ಕಾನು. ಕಾಲ ಕೆಟ್ಟಿದೆ" ಎಂದ ಕಳ್ಳ.

"ಈ ಮುದುಕನ ಮನೇಲಿ ಕಳ್ಳನಿಗೆ ಕದಿಯಲಿಕ್ಕೆ ಏನಿದೆ ಮಣ್ಣು? ದಿನಾ ನನ್ನ ತಿರುಗೂಳಿ ಮಗನಿ ಗಾಗಿ ಬಾಗಿಲು ತೆರೆದೇ ಇರುತ್ತೇನೆ" ಎಂದನು ಮುದುಕ.

ಕಳ್ಳನಿಗೆ ಮುದುಕನ ಮೇಲೆ ಕರುಣೆಯುಂಟಾ ಯಿತು. ಎಂದಾದರೂ ಸಮಯಬಿದ್ದಾಗ ಅವನ ಮಗನನ್ನು ನೋಡಿ ಚೆನ್ನಾಗಿ ಬುದ್ಧಿ ಹೇಳಬೇಕು ಎಂದುಕೊಂಡನು.

ತರುವಾಯ ಅವನು ನಿರ್ಭಯದಿಂದ ಬೀದಿಗೆ ಹೋದನು. ಸರಿಯಾಗಿ ಅದೇ ಸಮಯದಲ್ಲಿ ಕಳ್ಳ ನನ್ನು ಹುಡುಕುತ್ತಾ ಹೊರಟ ಚಿಕ್ಕದೊಂದು ಗುಂಪು ಅವನ ಕಡೆಗೇ ಬಂತು. ಅವರು ಅವನನ್ನು ನೋಡಿದ ಕೂಡಲೇ, ಅವನು ಬೇರೆ ಊರಿನಿಂದ ಬಂದವ ನಂತಿದ್ದಾನೆ. ಈ ನಡುರಾತ್ರಿಯಲ್ಲಿ ಹೀಗೆ ಎತ್ತ ಹೋಗುವನೋ ಕೇಳೋಣ ಎಂದುಕೊಂಡು ಅವನ ಸಮೀಪ ಬಂದರು.

"ಯಾರಯ್ಯಾ, ಈ ಸಮಯದಲ್ಲಿ?" ಎಂದು ಒಬ್ಬನು ಕೇಳಲು, "ನಾನು ಆ ಪಕ್ಕದ ಮನೆಯವರ ಮಗನಿಗೆ ಸ್ನೇಹಿತ. ಅವರ ಮಗ ತಂದೆಗೆ ಒಂದು ಸಮಾಚಾರ ಹೇಳಿಕಳಿಸಿದ್ದ. ಹೇಳಿ ಹೋಗಲು ಬಂದೆ" ಎಂದನು ಕಳ್ಳ.

"ಅದೆಷ್ಟು ನಿಜವೋ ತಿಳಿದ ಮೇಲೆ ಹೋಗುವಿ ಯಂತೆ. ನಾವು ಒಬ್ಬ ಕಳ್ಳನನ್ನು ಹುಡುಕುತ್ತಾ ಬಂದಿದ್ದೇವೆ." ಎಂದ ಗುಂಪಿನಲ್ಲೊಬ್ಬ. ಕಳ್ಳನು ಧೈರ್ಯದಿಂದ ಅವರೊಂದಿಗೆ ವೃದ್ಧನ ಮನೆಗೆ ಹೋದನು.

ತೆರೆದೇ ಇದ್ದ ಬಾಗಿಲಿನಿಂದ ಎಲ್ಲರೂ ಮುದುಕನ ಮಲಗುವ ಕೋಣೆಗೇ ಹೋದರು. ಮುದುಕ ಮತ್ತೆ



ಮಂಚದ ಮೇಲೆ ಎದ್ದು ಕುಳಿತು ಒಂದೇ ಸಮನೆ ಬಾಗಿಲಕಡೆಗೇ ನೋಡುತ್ತಾ ಇದ್ದ.

"ಏನ್ರೀ ಅಜ್ಜಯ್ಯಾ, ಇವರೊಬ್ಬರು ಈ ಮನೆ ಯಿಂದ ಹೊರಗೆಬರುತ್ತಾ ಇದ್ದರು. ನಿಮ್ಮ ಮಗನ ಸ್ನೇಹಿತರೆನ್ನುತ್ತಾರೆ. ನಿಮಗೇನೋ ಸುದ್ದಿ ಹೇಳಲು ಬಂದರಂತೆ. ನಿಜವೇನು?"

ಮುದುಕನು ಗುಂಪಿನವರನ್ನು ನೋಡುತ್ತಾ "ಅವನು ಹೇಳುವುದು ಯಾವುದೂ ನಿಜವಲ್ಲ. ಅವನು ಕಳ್ಳ. ಕೈಯಲ್ಲಿ ಗಂಟಿನೊಂದಿಗೆ ಬಂದ. ಎರಡನೇ ಕೈಯಲ್ಲಿ ಕತ್ತಿ ಇತ್ತು. ಅವೆರಡನ್ನೂ ಅಗೊಳ್ಳಿ, ಆ ಮೂಲೆಯಲ್ಲಿ ಅಡಗಿಸಿಟ್ಟಿದ್ದಾನೆ" ಎಂದನು.

ಇಬ್ಬರು ಯುವಕರು ಮುದುಕ ತೋರಿಸಿದ ಮೂಲೆಗೆ ಹೋಗಿ ನೋಡಿದರು. ಅಲ್ಲಿ ಧನದ ಗಂಟೂ ಕತ್ತಿಯೂ ಅವರಿಗೆ ಸಿಕ್ಕಿದುವು. ಕಳ್ಳ ಓಡಲು ಹೆಣಗಾಡುವಾಗ ನಾಲ್ಕಾರು ಮಂದಿಗಳು ಸೇರಿ ಅವನನ್ನು ಒತ್ತಿ ಹಿಡಿದು ಬಂಧಿಸಿದರು.

"ಎಂಥಾ ಮೋಸದ ಮುದುಕನಿವ! ಕುರುಡಾ ಅಂದುಕೊಂಡು ಮೋಸಹೋಗಿ ಬಿಟ್ಟೆ. ನನ್ನನ್ನು ಹಿಡಿಯಬೇಕೆಂತಲೇ ಮನೆ ಬಾಗಿಲು ತೆಗೆದಿಟ್ಟೆಯಾ?" ಎಂದನು ಕಳ್ಳ.

"ಏನೋ ಬೀದೀಲಿ ಯಾರಾರೋ ಓಡಾಡುವ ಶಬ್ದ ಕೇಳಿ ಬಾಗಿಲು ತೆರೆದು ನೋಡಿದೆ. ದುಷ್ಟನಾದ ನನ್ನ ಮಗ ಬಂದನೇನೋ ಅಂತ. ನೀನು ಈ ಕಡೆಗೇ ಓಡಿಬರೋದು ಕಂಡಿತು. ಯಾರೋ ದುಷ್ಟರು ಓಡಿಸಿಕೊಂಡು ಬರುತ್ತಾರೇನೋ, ಬಂದರೆ ರಕ್ಷಿಸೋಣ ಅಂದುಕೊಂಡು ಬಾಗಿಲು ತೆರೆದಿಟ್ಟು ಮಂಚದಲ್ಲಿ ಸುಮ್ಮನೆ ಕುಳಿತೆ. ನೀನು ಕಳ್ಳಾ ಅಂತ ಗೊತ್ತಾಯ್ತು. ನನಗೆ ಕಣ್ಣು ಸರಿಯಾಗಿದೆ ಎಂದು ತಿಳಿದರೆ ನೀನು ಹಾನಿಮಾಡುತ್ತಿದ್ದಿ. ಹೌದಾ?" ಎಂದ ಮುದುಕ.

"ಹಾಗೇನು! ಏ ಮುದುಕಾ! ಎಂದೋ ಒಂದು ದಿನ ನಿನ್ನ ಮೇಲೆ ಹಗೆ ತೀರಿಸದೆ ಬಿಡಲಾರೆ!" ಎಂದನು ಕಳ್ಳ ಕೋಪದಿಂದ.

ಮುದುಕನು ಶಾಂತತೆಯಿಂದಲೇ "ಹಾಗೆಲ್ಲಾ ಮಾಡುವಿಯಾದರೂ ಇಷ್ಟು ಜನರ ಮುಂದೆ ಹೇಳಬಾರದಿತ್ತು. ನೀನೊಬ್ಬ ಕಳ್ಳ. ನೀನೊಬ್ಬನೇ ನನ್ನ ಮನೆಗೆ ಬಂದುದರಿಂದ ನಾನು ಕಣ್ಣಿದ್ದೂ ಕುರುಡನಂತೆ ಆಗಬೇಕಾಯಿತು. ಆದರೆ ಹತ್ತು ಮಂದಿ ಸೇರಿದಾಗ ದೇಹಶಕ್ತಿ ಇದ್ದ ನೀನೇ ಬಲಹೀನವಾಗಿ ಬಿಟ್ಟಿರುವಿ. ಕಳ್ಳ ಬಲಹೀನನನ್ನು ಕುರುಡು ಮಾಡುತ್ತಾನೆ. ಹತ್ತು ಮಂದಿ ಕೂಡಿಬಿಟ್ಟರೆ ದೇಹದಲ್ಲಿ ಶಕ್ತಿ ಇದ್ದೂ ನೀನು ಬಲಹೀನನಾದಿ. ಕಳ್ಳನು ಬಲಹೀನನನ್ನು ಕುರಡನಾಗಿ ಮಾಡಿದರೆ. ಸಮೂಹವು ಮುದುಕನನ್ನು ಕೂಡಾ ಬಲವಂತನನ್ನಾಗಿ ಮಾಡುತ್ತದೆ. ನೀನು ನನ್ನ ಮೇಲೆ ಹಗೆ ಬಿಟ್ಟು ಸುತ್ತಲೂ ಕೂಡಿದ ಹತ್ತುಮಂದಿಯನ್ನು ನಂಬಿಕೊಂಡಿರು. ಆಗ ಅವರು ತಪ್ಪದೆ ನಿನಗೆ ಒಳಿತೇ ಮಾಡುತ್ತಾರೆ. ಅವರನ್ನು ದೂಚಿಕೊಂಡು, ಕೋಪತಾಪದಿಂದ ಕುರುಡನಾಗಿ ಮಾತಾಡಿದರೆ ಹೆಚ್ಚಿನ ಶಿಕ್ಷೆಯೇ ಬೀಳುತ್ತದೆ. ಎಚ್ಚರಿಕೆಯಿಂದ ಇರಪ್ಪಾ" ಎಂದನು.

ಅದನ್ನು ಕೇಳಿ ಗುಂಪಿನಲ್ಲಿ ಒಬ್ಬನು, "ಅಜ್ಜಯ್ಯ ಸರಿಯಾಗಿಯೇ ಹೇಳಿದರು. ಇವರ ಮಗನೊಬ್ಬ ದುಸ್ಸಹವಾಸದಲ್ಲಿ ಅಲೆಯುವುದೇನೋ ನಿಜವೇ. ಅದನ್ನು ಇವರು ಕಳ್ಳನನ್ನು ಸಿಗಿಸಿಹಾಕಲು ಚೆನ್ನಾಗಿಯೇ ಉಪಯೋಗಿಸಿದರು. ಅವನಿಗೆ ನಾವೆಲ್ಲಾ ಸ್ವಲ್ಪ ಬುದ್ಧಿ ಹೇಳಬೇಕು" ಎಂದನು.

ಕದ್ದ ಸೊತ್ತಿನೊಂದಿಗೆ ಸಿಕ್ಕಿಬಿದ್ದ ಕಳ್ಳನನ್ನು ವೆಂಕಟಾಚಲಯ್ಯ ವಿಚಾರಣೆಗೆ ಗುರಿಪಡಿಸಿದರು. ವೃದ್ಧನ ಮಾತಿನಿಂದ ಬುದ್ಧಿ ತಂದುಕೊಂಡ ಕಳ್ಳನು, ಬಿಡುಗಡೆಯಾದ ಮೇಲೆ ಒಳ್ಳೆಯುವನಾಗಿಯೇ ಬಾಳಿದನು.






# ಮಂತ್ರದುಂಗುರ

ಅದೇ ಮರದ ಕೊಂಬೆಯ ಹೊರತು ಬೇರೆಲ್ಲಿಗೂ ಹೋಗಲಾಗದೆ ಶವದೊಳಗೆ ಸೇರಿಕೊಂಡು ನೇತಾಡುತ್ತಿದ್ದ ಬೇತಾಳವು ಇದಿರು ನೋಡುತ್ತಿದ್ದ ಹಾಗೆಯೇ, ಮತ್ತೆ ಬಿಡದೆ ಬಂದ ರಾಜಾ ತ್ರಿವಿಕ್ರಮನು, ಮರದ ಮೇಲೇರಿ ಶವವನ್ನು ಕೆಳಗಿಳಿಸಿ ಹಾಗೆಯೇ ತನ್ನ ಹೆಗಲಿಗೇರಿಸಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದ ಬಾಯಿಯ ಮೂಲಕ ಬೇತಾಳವು ಮಾತಾಡಲು ತೊಡಗಿ, "ಭಳಿರೇ, ಮಹಾರಾಜನೇ ! ಇಷ್ಟೊಂದು ಶ್ರಮ ಸಾಹಸ ಮಾಡಿ ನೀನು ಸಾಧಿಸಲೆಳಸಿದ ಕಾರ್ಯದಲ್ಲಿ ಯಾವ ಕಾಲಕ್ಕೆ ಜಯಪ್ರದನಾಗುವಿಯೋ ಏನೋ ! ಆದರೆ ಒಂದು ವಿಷಯ ಮಾತ್ರ ಎಚ್ಚರಿಸುತ್ತೇನೆ. ಇದು ನಿನಗೂ ಪಾಠವಾಗಬಹುದು. ಕೆಲವರು ಅಷ್ಟಕಷ್ಟಗಳನ್ನು ಸಹಿಸಿ ಸಾಧಿಸಿಕೊಂಡುದನ್ನು ಬಲು ಹಗುರಾಗಿ ನೋಡಿ ಬಿಟ್ಟುಬಿಡುವುದೂ ಉಂಟು. ಇದಕ್ಕೆ ಉದಾಹರಣೆಯಾಗಿ ಒಂದು ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ಇದ್ದರೆ ಶ್ರಮವನ್ನು ಮರೆತು ನಡೆಯಬಹುದು" ಎಂದು ಕಥೆಯನ್ನು ಪ್ರಾರಂಭಿಸಿತು.

ಬೇತಾಳಕಥೆಗಳು



ಸುಮಂತನೆಂಬೊಬ್ಬನಿಗೆ ಬಾಲ್ಯದಲ್ಲಿಯೇ ಪಿತೃ ವಿಯೋಗವೂ, ಮಾತೃ ವಿಯೋಗವೂ ಉಂಟಾಯಿತು. ಎಲ್ಲೆಲ್ಲೋ ತಿರುಗಿಕೊಂಡಿದ್ದ ಅವನ ಮೇಲೆ ಒಬ್ಬ ಮುನಿಗೆ ಕನಿಕರ ಬಂದು, ಆಶ್ರಮದಲ್ಲಿ ತಾನು ನಡೆಸುವ ಗುರುಕುಲದಲ್ಲಿ ಸೇರಿ ವಿದ್ಯಾಭ್ಯಾಸ ಮಾಡುವಂತೆ ಹೇಳಿ ಆದರಿಸಿದನು. ಅಲ್ಲಿ ಸುಮಂತನು ಅತ್ಯಂತ ಶ್ರದ್ಧೆಯಿಂದ ಗುರು ಸೇವೆಯನ್ನೂ, ವಿದ್ಯಾಭ್ಯಾಸವನ್ನೂ ಮಾಡಿ, ಅನೇಕ ಶಾಸ್ತ್ರಗಳಲ್ಲಿ ಎಲ್ಲರಿಗಿಂತ ಒಳ್ಳೆಯ ಪಾಂಡಿತ್ಯವನ್ನೂ ಸಂಪಾದಿಸಿದನು.

ಮುನಿ ಅವನ ಕೈಗೆ ಒಂದು ಯೋಗ್ಯತಾ ಪತ್ರವನ್ನು ಕೊಟ್ಟು, "ಅಪ್ಪಾ, ಇಲ್ಲಿ ನೀನು ಕಲಿಯಬೇಕಾದುದೆಲ್ಲಾ ಮುಗಿಯಿತು. ಸಮೀಪದಲ್ಲಿರುವ ಯಾವ ರಾಜ್ಯಕಾದರೂ ಹೋಗು. ಯಾವ ರಾಜನಾದರೂ ತನ್ನ ಆಸ್ಥಾನದಲ್ಲಿ ನಿನಗೆ ಉದ್ಯೋಗವನ್ನು ಕೊಡುತ್ತಾನೆ" ಎಂದು ಹರಸಿ ಕಳುಹಿಸಿದನು.

ಸುಮಂತನು ರೋಹಿತಪುರವನ್ನು ಪಾಲಿಸುವ ರಾಜನ ದರ್ಶನ ಮಾಡಬೇಕೆಂದುಕೊಂಡು ಆ ರಾಜ್ಯವಿರುವ ದಿಕ್ಕಿಗೆ ನಡೆದನು. ಆದರೆ ಸ್ವಲ್ಪದೂರ ಪ್ರಯಾಣ ಮಾಡಿದ ಮೇಲೆ, ದಾರಿ ತಪ್ಪಿತು. ಸರಿದಾರಿಯನ್ನು ಹುಡುಕುತ್ತಾ ನಡೆಯುತ್ತಿರಲು, ಸೂರ್ಯನು ಮುಳುಗುವ ಹೊತ್ತಿಗೆ ಅವನು ಅರಣ್ಯ ಪ್ರಾಂತ್ಯದಲ್ಲಿ ಸಿಕ್ಕಿಕೊಂಡನು.

ಇನ್ನು ರಾತ್ರಿಯ ಕಾಲವನ್ನು ಎಲ್ಲಿ ಕಳೆಯುವುದೆಂಬ ಸಮಸ್ಯೆಯುಂಟಾಯಿತು. ಅವನು ಸುತ್ತಲೂ ಪರೀಕ್ಷಿಸಿ ನೋಡುತ್ತಿರಲು, ಸಮೀಪದಲ್ಲಿದ್ದೊಂದು ಗುಡ್ಡದ ಮೇಲೆ ಒಂದು ಶಿಥಿಲ ಗೃಹವಿರುವುದು ಕಂಡಿತು. ಹೇಗಾದರೂ ಗುಡ್ಡ ಹತ್ತಿ ಆ ಮನೆಯನ್ನು ಸೇರಿಬಿಡಬೇಕೆಂದುಕೊಂಡು ಸುಮಂತನು ಆ ಗುಡ್ಡದ ಕಡೆಗೇ ಹೋದನು.

ಗುಡ್ಡದ ಬುಡದಲ್ಲಿ ಒಬ್ಬ ಯುವಕನು ಸುಮ್ಮನೆ ನಿಂತಿರುವುದನ್ನು ನೋಡಿ ಸುಮಂತನಿಗೆ ಆಶ್ಚರ್ಯವಾಯಿತು. ಅವನ ದುಸ್ತುಗಳು ತುಂಬ ಬೆಲೆ ಬಾಳುವಂಥವು. ನೋಡಿದರೆ ಯಾವುದೋ ದೇಶದ ಯುವರಾಜನ ಹಾಗೆ ಕಾಣುತ್ತಿದ್ದನು. ಯಾರೋ ಒಬ್ಬನು ಸಿಕ್ಕಿದನೆಂಬ ಸಂತೋಷದಲ್ಲಿ ಸುಮಂತನು ಮುಗುಳು ನಗುತ್ತಾ ಅವನ ಬಳಿಗೆ ಹೋಗಿ, ಕೈಜೋಡಿಸಿ ನಮಸ್ಕಾರ ಮಾಡಿದನು.

ಯುವಕನು ಪ್ರತಿ ನಮಸ್ಕಾರವೇನೂ ಮಾಡದೆ, ಮುಖದಲ್ಲಿ ಗಂಭೀರಭಾವ ತಂದುಕೊಂಡು, "ನೀನು ಕೂಡಾ ನಿನ್ನ ಅದೃಷ್ಟ ಪರೀಕ್ಷೆ ಮಾಡಲು ಬಂದೆಯೇನು ? ನಮ್ಮಿಬ್ಬರಲ್ಲಿ ಅದರ ಅವಕಾಶವು ಯಾರಿಗೆ ಬರುತ್ತದೆಂದು ತಿಳಿಯಲು, ಕತ್ತಿಯುದ್ಧದ ಹೊರತು ಬೇರೆ ದಾರಿ ಇಲ್ಲ. ನಿನ್ನ ಹತ್ತಿರ ಕತ್ತಿ ಇದ್ದರೆ ತೆಗೆ, ಇಲ್ಲದಿದ್ದರೆ ಹೇಗಾದರೂ ನನ್ನನ್ನು ತಡೆ. ಸಿದ್ಧನಾಗು" ಎಂದು ಒರೆಯೊಳಗಿನಿಂದ ಸರಕ್ಕನೆ ಕತ್ತಿಯನ್ನು ಎಳೆದು ನೆಗಹಿದನು.

ಸುಮಂತನು ಆಶ್ಚರ್ಯಪಡುತ್ತ, "ನೀವೇನು ಹೇಳುವಿರಿ? ನಮ್ಮಿಬ್ಬರೊಳಗೆ ಕತ್ತಿಯುದ್ಧವೇ! ಅಸಲು ನನ್ನ ಹತ್ತಿರ ಕತ್ತಿಗಿತ್ತಿ ಯಾವುದೂ ಇಲ್ಲವಲ್ಲ? ವೈರತ್ವವಂತೂ ಅದಕ್ಕಿಂತ ಮೊದಲೇ ಇಲ್ಲ!" ಎಂದನು.

"ಹಾಗಾದರೆ ನೀನು ಈ ಅಮಾವಾಸ್ಯೆಯ ಕಾಳ ರಾತ್ರಿ ಬರುವವರೆಗೂ ತಾಳು. ಈ ಅಮಾವಾಸ್ಯೆಯ ಅರ್ಧ ರಾತ್ರಿಯ ಹೊತ್ತಿಗೆ ನನ್ನ ಅದೃಷ್ಟವು ಎಂತಹುದು ಎಂದು ಗೊತ್ತುಪಡಿಸಿಕೊಳ್ಳುತ್ತೇನೆ" ಎಂದನು ಯುವಕ.

ಈ ಮಾತುಗಳು ಸುಮಂತನನ್ನು ಇನ್ನಷ್ಟು ಆಶ್ಚರ್ಯಪಡಿಸಿದುವು. ಅವನು ಯುವಕನೊಂದಿಗೆ, "ಮತ್ತೊಮ್ಮೆ ಹೇಳುತ್ತೇನೆ. ನೀವೇನು ಹೇಳುವಿರೋ ನನಗಂತೂ ಅರ್ಥವಾಗಿಲ್ಲ. ನಿಮ್ಮ ಅದೃಷ್ಟವೇನೋ ಪರೀಕ್ಷೆ ಮಾಡಬೇಕಾದರೆ ನಾನು ಅಡ್ಡ ಬರುವೆನೆಂದುಕೊಂಡಿರಾ? ಇಲ್ಲಯಿಲ್ಲ. ನಾನೊಬ್ಬ ಪ್ರಯಾಣಿಕ. ದಾರಿ ತಪ್ಪಿಹೋಗಿ ಈ ರಾತ್ರಿಯನ್ನು ಎಲ್ಲಿ ಕಳೆಯುವುದೋ ಎಂದು ನೋಡುತ್ತಾ ಗುಡ್ಡದ ಮನೆಯನ್ನು ನೋಡಿ ಹೀಗೆ ಬಂದೆ, ಅಷ್ಟೇ" ಎಂದನು.

ಈ ಮಾತು ಕೇಳಿದ ಮೇಲೆ ಯುವಕನು ಶಾಂತನಾದನು. ಅವನು ಅಲ್ಲಿಗೆ ಏಕೆ ಬಂದನೆಂಬುದನ್ನು ಕುರಿತು ವಿವರವಾಗಿ ಸುಮಂತನಿಗೆ ಹೇಳಿದನು. ಆ ಯುವಕನು ರೋಹಿತಪುರದ ಯುವರಾಜ. ಈ ಗುಡ್ಡದ ಮೇಲಿರುವ ಶಿಥಿಲ ಗೃಹದೊಳಗೆ ಭೂತ ಪ್ರೇತಗಳು ವಾಸಮಾಡಿಕೊಂಡಿವೆ. ಕಳೆದ ಐವತ್ತು ವರ್ಷಗಳಿಂದ ಆ ಶಿಥಿಲ ಗೃಹದೊಳಗೆ ಪ್ರವೇಶಿಸಿದವರಾರೂ ಬದುಕಿ ಬಂದುದಿಲ್ಲ. ಆ ಗೃಹದೊಳಗೆ ಒಂದು ಪಟ್ಟೆ ಮಂಚವಿದೆ. ಅದರ ಮೇಲೆ ತಲೆದಿಂಬಿನ ಬುಡದಲ್ಲಿ ಒಂದು ಮಂತ್ರದುಂಗುರವಿದೆ. ಅಮಾವಾಸ್ಯೆಯ ಕತ್ತಲೆಯ ರಾತ್ರಿಯನ್ನು ಆ ಶಿಥಿಲ



ಗೃಹದೊಳಗಿದ್ದು ಕಳೆಯುವವರಿಗೇ ಆ ಮಂತ್ರದುಂಗುರ ಲಭಿಸುತ್ತದೆ. ಅದನ್ನು ಬೆರಳಲ್ಲಿ ಧರಿಸಿಕೊಂಡವರು ನೂರು ವರ್ಷ ತುಂಬದೆ ಸಾಯುವುದಿಲ್ಲ ವೆಂಬುದು ಆ ಉಂಗುರದ ಮಹತ್ವ.

ಆ ದಿನವೇ ಅಮಾವಾಸ್ಯೆಯಾದುದರಿಂದ ಯುವರಾಜನು ಶಿಥಿಲ ಗೃಹದಲ್ಲಿ ರಾತ್ರಿಯನ್ನು ಕಳೆಯಲು ಪ್ರಯತ್ನಿಸುತ್ತಿದ್ದಾನೆ.

"ಆ ಮಂತ್ರದ ಉಂಗುರವನ್ನು ಸಂಪಾದಿಸಬೇಕೆನ್ನುವವರು ಏಕಾಂಗಿಯಾಗಿ ಗುಡ್ಡದ ಮೇಲೆ ಹೋಗಿ ಆ ಭೂತಪ್ರೇತಗಳಿರುವ ಗೃಹದೊಳಗೆ ಮಂಚದ ಮೇಲೆ ಬೆಳಗಾಗುವವರೆಗೂ ಇರಬೇಕು. ನೀನು ಆಕಸ್ಮಿಕವಾಗಿ ಇಲ್ಲಿಗೆ ಬಂದುದು ನನಗೊಂದು ಅದೃಷ್ಟವೆಂದು ಕಾಣುತ್ತದೆ. ನೀನು ಗುಡ್ಡದ ಕೆಳಗೆ ನನಗಾಗಿ ಕಾಯುತ್ತಿದ್ದರೆ, ನನಗೊಂದು ಧೈರ್ಯ. ನಾನು ಹೋಗಿ ಕೆಳಗೆ ಬರುವವರೆಗೆ ಇರುವಿಯಷ್ಟೆ?" ಎಂದನು ಯುವರಾಜ.

ಸುಮಂತನು ಆಗಲೆಂದು ಒಪ್ಪಿ, ಅಲ್ಲಿರುವ ಒಂದು ಬಂಡೆಯ ಮೇಲೆ ಕುಳಿತುಕೊಳ್ಳುತ್ತ, "ನಿಮಗಾಗಿ ಬೆಳಗಾಗುವವರೆಗೆ ಇಲ್ಲಿಯೇ ಇರುತ್ತೇನೆ. ನಿಮಗೆ ಜಯವಾಗಬೇಕೆಂದು ಮನಃಪೂರ್ವಕವಾಗಿ ಹಾರೈಸುತ್ತಿರುತ್ತೇನೆ" ಎಂದನು.

ಸೂರ್ಯನು ಮುಳುಗಿ ಕ್ರಮವಾಗಿ ಅರಣ್ಯ ಪ್ರಾಂತವನ್ನು ಕತ್ತಲೆ ಕವಿಯತೊಡಗಿತು. ಯುವರಾಜನು ಗುಡ್ಡವನ್ನು ಏರಲು ತೊಡಗಿದನು. ಸುಮಂತನು ಬಂಡೆಯ ಮೇಲೆ ಸುಮ್ಮನೆ ಕುಳಿತು, ಅಮಾವಾಸ್ಯೆಯ ಕತ್ತಲೆಯಲ್ಲಿ ಪಕ್ಷಿಗಳೂ ಮೃಗಗಳೂ ಮಾಡುವ ಬೇರೆ ಬೇರೆ ಧ್ವನಿಗಳನ್ನು ಕೇಳುತ್ತ ಹೊತ್ತು ಕಳೆಯುತ್ತಿದ್ದನು. ಸ್ವಲ್ಪಹೊತ್ತಿಗೆ ಅಡಿಗಳ ಸಪ್ಪಳವನ್ನು ಕೇಳಿದಾಗ, ಯುವರಾಜನು ಗುಡ್ಡವನ್ನಿಳಿದು ಬರುತ್ತಿದ್ದನು.

ಹತ್ತಿರ ಬಂದ ಕೂಡಲೇ ಸುಮಂತನು ಅವನನ್ನು ನೋಡಿ, "ಏನಾಯಿತು ? ಇಷ್ಟು ಬೇಗನೇ ಕೆಳಗೆ ಬಂದಿರಲ್ಲಾ ?" ಎಂದು ಕೇಳಿದನು.

ಯುವರಾಜನು ತಲೆ ತಗ್ಗಿಸಿಕೊಂಡು, ಕಂಪಿಸುವ ಕಂಠದಿಂದ "ಅರ್ಧ ಗುಡ್ಡ ಹತ್ತುವಷ್ಟರಲ್ಲಿ ನನಗೇನೋ ಹೇಳಲಾಗದಂಥ ಭಯ ಉಂಟಾಯಿತು. ಹಿಂದಿರುಗಿ ಬಂದುಬಿಟ್ಟೆ" ಎಂದನು.

"ಭಯವೇಕೆ ಯುವರಾಜಾ ? ದೇವರ ಮೇಲೆ ಭಾರ ಹಾಕಿ, ಧೈರ್ಯದಿಂದ ಮೇಲೆ ಹೋಗಿಬಿಡಿರಿ" ಎಂದು ಸುಮಂತನು ಯುವರಾಜನಿಗೆ ಉತ್ಸಾಹ ಬರುವಂತೆ ಹೇಳಿದನು. ಭೂತ ಪ್ರೇತ ಪಿಶಾಚಿಗಳು ತಾವಾಗಿ ಯಾರಿಗೂ ಕೇಡು ಮಾಡುವುದಿಲ್ಲವೆಂದೂ ಹೇಳಿದನು.

ಯುವರಾಜನು ಮತ್ತೊಂದು ಸಾರಿ ಗುಡ್ಡದ ಮೇಲಕ್ಕೆ ಹತ್ತಿದನು. ಅವನು ಸ್ವಲ್ಪ ದೂರ ಹೋಗುವಷ್ಟರಲ್ಲಿ ಶಿಥಿಲಗೃಹದ ಹಿಂಬದಿಯಿಂದ ಜೋರಾಗಿ ನರಿಗಳ ಊಳ್ಧ್ವನಿ ಕೇಳಿಸಿತು. ಅದೇ ಸಮಯದಲ್ಲಿ ಬೆಂಕಿಯ ಕಿಡಿಗಳು ಹೊಳೆಯುವ ಹಾಗೆ ಮಿಂಚು ಹುಳುಗಳು ಶಿಥಿಲಗೃಹದ ಸುತ್ತಲೂ ಹಾರಾಡತೊಡಗಿದುವು. ಅದೇನೋ ಬೆಂಕಿಯ



ಮನೆಯೋ ಎಂಬ ಭ್ರಮೆ ಹುಟ್ಟಿಸಿತು. ಮುಂದೆ ಅವನ ಎರಡು ಕಾಲುಗಳೂ ಕದಲಲಿಲ್ಲ.

ಯುವರಾಜನು ಹೆದರಿ ಮತ್ತೆ ಕೆಳಗಿಳಿದು ಬಂದು ಸುಮಂತನೊಂದಿಗೆ, " ಮಿತ್ರಾ, ಭೂತಪ್ರೇತಗಳಿರುವ ಆ ಕೋಮೆಯಲ್ಲಿ ರಾತ್ರಿ ಪೂರಾ ಕಳೆಯುವಂತಹ ಧೈರ್ಯ ಸಾಹಸವು ನನಗಿಲ್ಲ. ಸೋತೆನಪ್ಪಾ " ಎಂದನು ನಿಸ್ಪೃಹನಾಗಿ.

ಸುಮಂತನು ಸ್ವಲ್ಪಹೊತ್ತು ಆಲೋಚನೆ ಮಾಡಿ, " ನಿರಾಶರಾಗಬೇಡಿ ಯುವರಾಜಾ. ನೀವು ಅನುಮತಿ ಕೊಟ್ಟರೆ ನಾನೂ ಒಂದು ಪ್ರಯತ್ನ ಮಾಡುತ್ತೇನೆ " ಎಂದನು.

" ಅದು ನಿನ್ನ ಇಷ್ಟ. ನಿನ್ನನ್ನು ಪ್ರಯತ್ನ ಮಾಡಬೇಡವೆನ್ನಲು ನಾನಾರು ? " ಎಂದನು ಯುವರಾಜ ಶಾಂತನಾಗಿ.

ಸುಮಂತನು ಗುಡ್ಡದ ಮೇಲೆ ಹತ್ತಿ, ಯಾವ ಶಬ್ದಗಳನ್ನೂ ಲಕ್ಷ್ಯಕ್ಕೆ ತಂದುಕೊಳ್ಳದೆ, ಸೀದಾ ಶಿಥಿಲಗೃಹವನ್ನು ತಲುಪಿದನು. ಒಳಗೆ ಗಾಡಾಂಧಕಾರ. ಬಾಗಿಲುಗಳು ತೆರೆದೇ ಇದ್ದುವು. ಅವನು ಒಳಗೆ ಕಾಲಿಡುವಾಗ ಗುಂಡಿಗೆ ಅದುರಿ ಹೋಗುವ ಹಾಗೆ ಯಾರೋ ಅರಚುವ ಶಬ್ದವೂ, ನಗುವ ಧ್ವನಿಗಳೂ ಹೊರಟವು. ಅದನ್ನೆಲ್ಲ ಮೊದಲೇ ಊಹಿಸಿಕೊಂಡವನಾದುದರಿಂದ ಸುಮಂತನು ಸ್ವಲ್ಪವೂ ಹೆದರದೆ ಕೈಯಿಂದ ತಡವುತ್ತ ಕೋಣೆಯೊಳಗಿನ ಮಂಚದ ಮೇಲೆ ಹತ್ತಿ ಕುಳಿತನು.

" ಲೋ ! ನೂರು ವರ್ಷ, ಬದುಕಬೇಕೆಂಬ ನಿನ್ನ ದುರಾಶೆಯೇ ಈ ರಾತ್ರಿ ನಿನ್ನ ಸಾವಿಗೆ ಕಾರಣವಾಗುತ್ತದೆ, ಜಾಗ್ರತೆ ! " ಎಂಬ ಭೀಕರ ಕಂಠಸ್ವರವೊಂದು ಅವನ ಕಿವಿಗೆ ಬಿತ್ತು.

" ನನಗೆ ನೂರು ವರ್ಷ ಬದುಕಬೇಕೆಂಬ ದುರಾಶೆಯೇ ಇಲ್ಲ. ನನಗಾಗಿ ಬಂದವನೂ ಅಲ್ಲ. ಆದರೆ ಈ ರಾತ್ರಿಯಲ್ಲೇ ಮರಣವೆಂಬುದು ವಿಧಿಯ ನಿರ್ಣಯವಾದರೆ ತಪ್ಪಿಸಿಕೊಳ್ಳುವ ಯೋಚನೆಯೂ ನನಗಿಲ್ಲ. ಅದು ಸಾಧ್ಯವೂ ಅಲ್ಲ " ಎಂದನು ಸುಮಂತ ದಿಟ್ಟತನದಿಂದ.





ಆಮೇಲೆ ಆ ಭೂತಗೃಹವು ಬಹಳ ಹೊತ್ತು ನಿಃಶಬ್ದವಾಗಿ ಹೋಯಿತು. ಮತ್ತೆ ಇದ್ದಕ್ಕಿದ್ದ ಹಾಗೆ ಪಕಪಕನೆ ನಗುವ ಶಬ್ದ ಹೊರಟಿತು. ಅದು ನಿಂತ ಮೇಲೆ, ಮೈನವಿರೇಳುವ ಹಾಗೆ ಕೀಚುಕಂಠದಿಂದ, "ಏನೋಯ್! ನಿನಗೆ ಭೂತ ಪ್ರೇತ ಪಿಶಾಚಿಗಳೆಂದರೆ ಭಯವೇ ಇಲ್ಲದೆ? ತಟಪಟ ಹೊರಳಾಡಿ ಕಿರಿಚುತ್ತ ನೀನು ಸಾಯುವುದನ್ನು ನೋಡಬೇಕೆಂದರೆ, ಹೀಗೆ ಸುಮ್ಮನೆ ಬೊಂಬೇ ಹಾಗೆ ಕುಳಿತಿದ್ದೀಯಲ್ಲಾ! ಏನಿದು?" ಎಂದು ಕೇಳಿತು.

"ಬದುಕಿಕೊಂಡಿರುವ ಮನುಷ್ಯನು ಸತ್ತುಹೋದ ಪಿಶಾಚಿಗಳಿಗೆ ಹೆದರುವ ಅಗತ್ಯವೇನಿದೆ? ಪಿಶಾಚಿಗಳೆಂದರೆ ನನಗೆ ಅಯ್ಯೋ ಪಾಪ ಅನಿಸುತ್ತೆ!" ಎಂದನು ಸುಮಂತ.

ಮತ್ತೆ ಸ್ವಲ್ಪಹೊತ್ತಿಗೆ ಪಟ್ಟೆ ಮಂಚವು ಹಾಗೂ ಹೀಗೂ ಓಲಾಡತೊಡಗಿತು. ಬಾಗಿಲ ಕಡೆಯಿಂದ ಬೆಂಕಿಯಂತಹ ಬಿಸಿಬಿಸೀ ಗಾಳಿ ಒಳಗಡೆಗೆ ಬೀಸಿತು.

ಆ ಗಾಳಿಯ ಸೊಂಯ್ ದನಿ ಕಿವಿಯನ್ನು ಸೀಳುವಂತಿತ್ತು. ಕೆಲವು ಬಾವಲಿಗಳು ಕೀಚುಕೀಚೆನ್ನುತ್ತ ಸುಮಂತನ ತಲೆಯ ಮೇಲೆಯೇ ಆಚೀಚೆ ಓಡಿದುವು. ಇದಾವುದಕ್ಕೂ ಕದಲದೆ ಸುಮಂತನು ಮಂಚದ ಮೇಲೆ ಕುಳಿತೇ ಇದ್ದನು. ಯಾವ ಅಪಾಯವೂ ಅವನ ಶರೀರವನ್ನು ಸ್ಪರ್ಶಿಸಲೇ ಇಲ್ಲ.

ನೋಡುತ್ತಿದ್ದ ಹಾಗೆ ಬೆಳ್ಳಗೆ ಬೆಳಗಾಯಿತು. ಭೂತಗೃಹದಲ್ಲಿ ವಿಕೃತ ಬೀಭತ್ಸಗಳೆಲ್ಲ ಶಾಂತವಾದುವು. ಎಲ್ಲಾ ಕಡೆಗೂ ಸೂರ್ಯಕಾಂತಿ ಪ್ರವೇಶ ಮಾಡಿತು. ಸುಮಂತನು ಮಂಚದ ಮೇಲಿನ ದಿಂಬನ್ನೆತ್ತಿ ಅಲ್ಲಿದ್ದ ಉಂಗುರವನ್ನು ತೆಗೆದುಕೊಂಡನು.

ಅವನು ಗುಡ್ಡವಿಳಿದು ಬಂದಾಗ ಯುವರಾಜನು ಒಂದು ಬಂಡೆಗೆ ಒರಗಿ ನಿದ್ದೆ ಮಾಡಿಕೊಂಡಿದ್ದನು. ಸುಮಂತನು ಅವನ ಕತ್ತಿಯನ್ನೇ ಸ್ವಲ್ಪಹೊತ್ತು ದಿಟ್ಟಿಸಿದನು. ಆಮೇಲೆ ಗಂಟಲು ಕೆನೆದು ಶಬ್ದ ಹೊರಡಿಸಿದನು. ಯುವರಾಜನಿಗೆ ಎಚ್ಚರ ಬಾರದಿರುವುದನ್ನು ನೋಡಿ ಪಕ್ಕದ ಮರದ ಕೊಂಬೆಯನ್ನು ಹಿಡಿದು ಗಲಗಲನೆ ಅಲುಗಾಡಿಸಿದನು. ಆದರೂ ಯುವರಾಜನು ಕಣ್ಣು ಬಿಡಿಸಲಿಲ್ಲ.

ಸುಮಂತನು ಪಕ್ಕದಲ್ಲಿದ್ದ ಇನ್ನೊಂದು ಬಂಡೆಯ ಮೇಲೆ ಕುಳಿತನು. ಇದ್ದಕಿದ್ದ ಹಾಗೆ ಗುಡ್ಡದ ಮೇಲಿನಿಂದ ಭಯಂಕರವಾಗಿ ಯಾರೋ ಅರ್ಭಟಿಸಿದರು. ಆ ಶಬ್ದದಿಂದ ಯುವರಾಜನಿಗೆ ಎಚ್ಚರವಾಯಿತು. ಸುಮಂತನೂ ಅವನೂ ಬಿಟ್ಟ ಕಣ್ಣುಗಳಿಂದ ಗುಡ್ಡದ ಮೇಲೆ ನೋಡಿದರು. ಶಿಥಿಲಾವಸ್ಥೆಯಲ್ಲಿದ್ದ ಭೂತಗೃಹವು ಒಮ್ಮೆಗೇ ಮಗುಚಿಬಿದ್ದುಹೋಯಿತು. ಆ ಗುಡಿಸಲೇ ಕೂಗಿದಂತೆ ಪಿಶಾಚಿಗಳೆಲ್ಲ ಕೂಗುತ್ತಾ ಎತ್ತೋ ಹಾರಿಹೋದುವು.

ಸುಮಂತನು ತಾನು ತಂದ ಮಂತ್ರದುಂಗುರವನ್ನು ಯುವರಾಜನಿಗೆ ಕೊಡುತ್ತ, "ತಗೊಳ್ಳಿ!

ಅದ್ಭುತ ಮಹಿಮೆಯ ಮಂತ್ರದುಂಗುರ. ಭೂತ ಗೃಹದ ಮಂಚದಲ್ಲಿದ್ದುದು. ಸಂತೋಷವಾಗಿ ಧರಿಸಿಕೊಳ್ಳಿರಿ" ಎಂದನು.

"ಮಿತ್ರಾ, ನನ್ನ ಕಣ್ಣನ್ನೇ ನಂಬಲಾಗದಿದ್ದೇನೆ. ನೀನು ನಿಜವಾಗಿಯೂ ಬದುಕಿ ಬಂದಿರುತ್ತೀ. ಇದಕ್ಕಾಗಿ ನಿನಗೆ ಏನು ಬಹುಮಾನ ಕೊಡಲಿ?" ಎಂದು ಯುವರಾಜನು ಸ್ವಲ್ಪ ತಡೆದು, "ನನ್ನ ಕೊರಳಲ್ಲಿರುವ ಈ ರತ್ನಹಾರವು ಹತ್ತು ಸಾವಿರ ಚಿನ್ನದ ನಾಣ್ಯ ಬೆಲೆಯುಳ್ಳದ್ದು. ಇದನ್ನು ಕೇಳಿದರೆ ಈಗಲೇ ತೆಗೆದು ನಿನಗೆ ಕೊಟ್ಟುಬಿಡುತ್ತೇನೆ. ತೃಪ್ತಿ ತಾನೆ?" ಎಂದನು.

ಸುಮಂತನು ಬಹಳ ವಿನಯದಿಂದ, "ನಾನು ಪಂಡಿತ. ಇತರರಿಗೆ ವಿದ್ಯೆಯನ್ನು ಬೋಧಿಸುವುದು, ಇನ್ನಷ್ಟು ಪಾಂಡಿತ್ಯ ಸಂಪಾದಿಸಲು ಗ್ರಂಥರಚನೆ ಮಾಡುವುದು ಇಂಥದ್ದೇ ನನಗೆ ಆನಂದ. ಸಂಪತ್ತಿನ ಮೇಲೆ ಆಸಕ್ತಿ ಇಲ್ಲ" ಎಂದನು.

"ಹಾಗಾದರೆ ನನ್ನ ಮೇಲಿರುವ ನಿನ್ನ ಋಣವನ್ನು ಹೇಗೆ ತೀರಿಸಲಿ?" ಎಂದು ಯುವರಾಜನು ಕೇಳಿದನು.

"ಈ ರತ್ನಹಾರವನ್ನು ನೀವೇ ನನ್ನ ಪರವಾಗಿ ಮಾರಿ, ಬಂದ ಹಣದಿಂದ ಬಡವರಿಗೆ ವ್ಯಾಧಿಗ್ರಸ್ತರಿಗೆ ಸಹಾಯ ಕಾರ್ಯಗಳಿಗಾಗಿ ಉಪಯೋಗಪಡಿಸಿರಿ. ನಾನು ನನ್ನ ದಾರಿ ಹಿಡಿಯುತ್ತೇನೆ" ಎಂದು ಹೇಳಿ ಸುಮಂತನು ಅಲ್ಲಿಂದ ಹೊರಟನು.

ಆ ಮಾತನ್ನು ಕೇಳಿ ಯುವರಾಜನು ಆಶ್ಚರ್ಯಪಡುತ್ತ ಅವನನ್ನು ಕರೆದು, "ಎಲ್ಲಿಗೆ ಹೊರಟಿರುವಿ?" ಎಂದು ಕೇಳಿದನು.

"ಎಲ್ಲಿಗೆಂದು ಇನ್ನೂ ನಿರ್ಣಯಿಸಿಲ್ಲ. ವಿಷ್ಣುಪುರಕ್ಕೋ ಶಮಂತ ನಗರಕ್ಕೋ ಹೋಗುತ್ತೇನೆ" ಎಂದು ಸುಮಂತನು ಮತ್ತೆ ನಿಲ್ಲದೆ ಹೊರಟು ಹೋದನು.



ಬೇತಾಳವು ಹೀಗೆ ಕಥೆಯನ್ನು ಹೇಳಿ ಮುಗಿಸಿ, "ರಾಜಾ, ಭೂತಪ್ರೇತಗಳು ವಾಸಮಾಡುವ ಆ ಶಿಥಿಲ ಗೃಹದಿಂದ ಇದುವರೆಗೂ ಯಾರೊಬ್ಬರೂ ಬದುಕಿ ಬಂದಿರಲಿಲ್ಲ. ಸುಮಂತನು ಮಾತ್ರ ಅಲ್ಲಿಂದ ಹೇಗೆ ಬದುಕಿ ಬರಲು ಸಾಧ್ಯವಾಯಿತು? ಅಪೂರ್ವವಾದ ಮಹತ್ವದ ಉಂಗುರವನ್ನು ತಾನೇ ಇಟ್ಟುಕೊಳ್ಳಬಹುದಿತ್ತು. ಹಾಗೆ ಇಟ್ಟುಕೊಳ್ಳದೆ ಯುವರಾಜನಿಗೆ ಏಕೆ ಕೊಟ್ಟನು? ಅವನು ಹೋಗಬೇಕೆಂದುಕೊಂಡದ್ದು ರೋಹಿತಪುರಕ್ಕೆ. ಆದರೆ ಅಲ್ಲಿಯ ಯುವರಾಜನೊಂದಿಗೆ ಸ್ನೇಹವಾದ ಮೇಲೆ ಕೂಡಾ ಅಲ್ಲಿಗೆ ಹೋಗದೆ, ಅಪರಿಚಿತವಾದ ಮತ್ತೊಂದು ಪ್ರದೇಶಕ್ಕೆ ಹೋಗಬೇಕೆಂಬ ನಿಶ್ಚಯಕ್ಕೆ ಬಂದನೇಕೆ? ಈ ಸಂದೇಹಗಳಿಗೆ ತಕ್ಕ ಉತ್ತರ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಚೂರುಚೂರಾಗುತ್ತದೆಂಬುದು ಗೊತ್ತಿದೆಯಷ್ಟೇ? ಜೋಕೆ!" ಎಂದು ಸುಮ್ಮನಾಯಿತು. ಆದಕ್ಕೆ

ತ್ರಿವಿಕ್ರಮನು ಹೀಗೆಂದನು: "ಭೂತ ಪಿಶಾಚಿಗಳೆಂದರೆ ಏನೆಂದು ತಿಳಿದಿರುವ ಪಂಡಿತನಿಗೆ, ಅದಕ್ಕೆ ಮೊದಲು ಆ ಭೂತಗೃಹವನ್ನು ಪ್ರವೇಶಿಸಿದವರೆಲ್ಲಾ, ಅವುಗಳನ್ನು ನೋಡಿ ಹೆದರಿ ಸತ್ತು ಹೋಗಿದ್ದಾರೆಂಬುದು ಗೊತ್ತಾಗಿತ್ತು. ಅಂಥವರೇ ಸತ್ತು ಭೂತಗಳಾಗಿದ್ದಾರೆ. ಅಲ್ಲದೆ ಸುಮಂತನು ಆ ಮಂತ್ರದ ಉಂಗುರವನ್ನು ತಾನೇ ಇಟ್ಟುಕೊಳ್ಳದಿರಲು ಅನೇಕ ಕಾರಣಗಳೂ ಇವೆ. ಅವನಿಗೆ ವಿಧಿಯ ನಿರ್ಣಯದಲ್ಲಿ ಬಹಳ ನಂಬಿಗೆಯೂ ಇದೆ. ಮನುಷ್ಯನು ನೂರು ವರ್ಷ ಬದುಕುವ ವಿಚಾರ ದೊಡ್ಡ ವಿಷಯವೇನಲ್ಲ. ಅಷ್ಟು ದೀರ್ಘಕಾಲದಲ್ಲಿ ವಯೋಭಾರದಿಂದ, ವ್ಯಾಧಿಗಳ ಕಾರಣದಿಂದ ಮನುಷ್ಯನು ನಾನಾ ಯಾತನೆಗಳಿಗೆ ಗುರಿಯಾಗುವ ಅವಕಾಶಗಳಿವೆ. ಎಲ್ಲಕ್ಕಿಂತ ಮುಖ್ಯವಾಗಿ ಯುವರಾಜನು ಆ ಮಂತ್ರದುಂಗುರವನ್ನು ವಶಪಡಿಸಿಕೊಳ್ಳಬೇಕೆಂದು ಹಟಹಿಡಿದು ಬಂದವನು. ಸುಮಂತನು ಅದನ್ನು ಕೊಡದೆಹೋದರೆ ಅವನು ಸುಮಂತನನ್ನು ಕೊಲ್ಲಲೂ ಬಹುದು. ಗುಡ್ಡದಿಂದ ಸುಮಂತನು ಇಳಿದು ಬಂದ ಸಮಯದಲ್ಲಿ ಯುವರಾಜನು ಗಾಢ ನಿದ್ರೆಯಲ್ಲಿದ್ದನು. ಮನಸ್ಸು ಮಾಡಿದ್ದರೆ ಸುಮಂತನು ಕತ್ತಿಯಿಂದ ಅವನ ತಲೆ ಕಡಿಯಬಹುದಿತ್ತು. ಆದರೆ ಸುಮಂತನು ಪಂಡಿತನು, ಜ್ಞಾನಿ.

"ಆ ಯುವರಾಜನೊಂದಿಗೆ ಸೇರಿ ಸುಮಂತನು ರೋಹಿತಪುರಕ್ಕೆ ಹೋಗದಿರಲಿಕ್ಕೆ ಕೂಡಾ ಪ್ರಬಲವಾದ ಕಾರಣವಿದೆ. ಯುವರಾಜನಿಗೆ ಮಂತ್ರದ ಉಂಗುರವನ್ನು ಸ್ವಶಕ್ತಿಯಿಂದ ಸಾಧಿಸಿಕೊಂಡೆನೆಂಬ ಕೀರ್ತಿ ಬೇಕಾಗಿತ್ತು. ಸುಮಂತನು ನಿಜವಾದ ರಹಸ್ಯವನ್ನು ಎಂದಾದರೂ ಬಹಿರಂಗಪಡಿಸದಿರಲಾರನೆಂಬ ಭಯವು ಯುವರಾಜನನ್ನು ಪೇಧಿಸದೆ ಬಿಡಲಾರದು. ಆ ಭಯವಿಲ್ಲದಿರುತ್ತಿದ್ದರೆ ಅವನು ಪಂಡಿತನಾದ ಸುಮಂತನನ್ನು ತಮ್ಮ ಆಸ್ಥಾನಕ್ಕೆ ಬರಬೇಕೆಂದು ಆಹ್ವಾನಿಸುತ್ತಿದ್ದನು. ಆದರೆ ಯುವರಾಜನು ಮಾಡಿದ್ದೇನೆಂದರೆ, ಸುಮಂತನಿಗೆ ಆಗಿಂದಾಗಲೇ ಬಹುಮಾನವಾಗಿ ತನ್ನ ರತ್ನಹಾರವನ್ನು ತೆಗೆದುಕೊಳ್ಳುವಂತೆ ಹೇಳಿದ್ದಾನೆ. ಅದರ ಅರ್ಥ, ಇನ್ನು ನೀನು ನಮ್ಮ ರಾಜ್ಯದಲ್ಲಿರಬೇಕಾಗಿಲ್ಲವೆಂದು ಹೇಳುವುದೇ. ಪಂಡಿತನಾದ ಸುಮಂತನಿಗೆ ರೋಹಿತಪುರದ ರಾಜಾಸ್ಥಾನವಾದರೂ, ಬೇರೆ ಯಾವ ರಾಜಾಸ್ಥಾನವಾದರೂ ಒಂದೇ. ಆದುದರಿಂದಲೇ ಅವನು ರೋಹಿತಪುರದ ದಾರಿಯನ್ನು ಬಿಟ್ಟು, ಮತ್ತೊಂದು ದಿಕ್ಕಿಗೆ ಹೊರಟುಹೋದನು.

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಹಾರಿಹೋಗಿ ಎಂದಿನಂತೆ ಮರದ ಕೊಂಬೆಯನ್ನು ಹಿಡಿದು ನೇತಾಡತೊಡಗಿತು.





# ಶಾಪವೇ ವರ

ಹಿಂದೆ ಧರ್ಮಾಂಕಣವೆಂಬ ಊರಿನಲ್ಲಿ ಸೀತಾಪತಿ ಎಂಬ ಹಣ್ಣಿನ ವ್ಯಾಪಾರಿಯೊಬ್ಬನಿದ್ದನು. ಅವನು ಬೀದಿ ಬೀದಿ ತಿರುಗಿ ಹಣ್ಣು ಮಾರುವವನು. ಹಣ್ಣಿನ ತೋಟಗಳಿರುವ ಒಡೆಯರ ಹತ್ತಿರದಿಂದ, ಯಾವ ಯಾವ ಋತುಗಳಲ್ಲಿ ಯಾವ ಯಾವ ಹಣ್ಣುಗಳಾಗುತ್ತವೋ, ಅವುಗಳನ್ನು ಕೊಂಡುಕೊಂಡು ಸುತ್ತು ಮುತ್ತಲಿನ ಗ್ರಾಮಗಳಿಗೆ ಒಯ್ದು ಮಾರುವನು. ಅದೇ ಅವನ ಜೀವನದ ದಾರಿ.

ಒಂದು ದಿನ ಸೀತಾಪತಿ ರಾಮಪುರಕ್ಕೆ ಹಣ್ಣುಗಳನ್ನು ತೆಗೆದುಕೊಂಡು ಹೋದನು. ಆ ದಿನ ಆ ಗ್ರಾಮದಲ್ಲಿ ಸಂತೆ ನಡೆಯುತ್ತಿತ್ತು, ಸಂತೆಯಲ್ಲಿ ಸೀತಾಪತಿಯ ಒಂದು ಹೆಡಿಗೆ ಹಣ್ಣುಗಳೆಷ್ಟೂ ಕುಳಿತಲ್ಲೇ ವ್ಯಾಪಾರವಾಗಿ ಹೋಯಿತು. ಸಾಯಂಕಾಲದ ಹೊತ್ತಿಗೆ ಖಾಲೀ ಹೆಡಿಗೆಯನ್ನು ತಲೆಯ ಮೇಲಿಟ್ಟುಕೊಂಡು ತನ್ನ ಮನೆಯ ಕಡೆಗೆ ಹೊರಟನು.

ಹೋಗುವಾಗ ಸ್ವಲ್ಪ ದೂರದವರೆಗೆ ಕಾಡುದಾರಿಯಲ್ಲಿ ನಡೆಯಬೇಕಾಗಿತ್ತು. ಹಾಗೆ ನಡೆಯುವಾಗ ಚೆನ್ನಾಗಿ ಕತ್ತಲೆಯಾಯಿತು. ಸ್ವಲ್ಪ ದೂರ ನಡೆಯುತ್ತಿರಲು ತಲೆಯ ಮೇಲಿದ್ದ ಖಾಲೀ ಹೆಡಿಗೆ ಒಮ್ಮೆಲೇ ಭಾರವಾದಂತೆ ತೋರಿತು. ಅದೇನಾಯಿತಪ್ಪ !

ಈ ವಿಚಿತ್ರಕ್ಕೆ ಕ್ಷಣಕಾಲ ಹೆದರಿ ನಡುಗಿದನು ಸೀತಾಪತಿ. ಮರುಕ್ಷಣದಲ್ಲಿ ಧೈರ್ಯ ತಂದುಕೊಂಡು ಹೆಡಿಗೆಯನ್ನು ಕೆಳಗಿಳಿಸಿ ನೋಡಿದನು. ಕೆಳಗಿಳಿಸುವಾಗ ಭಾರವೇ ಅನಿಸಲಿಲ್ಲ. ಹೆಡಿಗೆ ಖಾಲಿಯಾಗಿಯೇ ಇದ್ದಿತು.

"ಛೆ ! ಏನೋ ನನ್ನ ಭ್ರಮೆ !" ಎಂದುಕೊಂಡು ಸೀತಾಪತಿ ಮತ್ತೆ ಹೆಡಿಗೆಯನ್ನು ತಲೆಯ ಮೇಲಿಟ್ಟುಕೊಂಡು ನಾಲ್ಕಡಿ ಇಟ್ಟನು.

ಅಷ್ಟರಲ್ಲಿ ಹೆಡಿಗೆ ಹೊರೆ ಭಾರವಾದಂತೆ ಅನಿಸತೊಡಗಿತು. "ಇದೇನು ಮಾಯೆ ! ಯಾವುದೋ ದೆವ್ವದ ಕಾಟವೇ ನಿಜ !" ಎಂದುಕೊಂಡು ಹೆದರಿದನು ಸೀತಾಪತಿ.

"ಹೆದರಿದೆಯೇನಪ್ಪಾ ಸೀತಾಪತೀ ?" ಎಂಬ ಒಂದು ಮಂಜುಳ ಕಂಠಸ್ವರವು ಅವನ ಕಿವಿಗೆ ಬಿತ್ತು.

ಅದನ್ನು ಕೇಳಿ ಸೀತಾಪತಿ ಧೈರ್ಯ ತಂದುಕೊಂಡು, "ಹೆದರಲಿಕ್ಕೆ ನಾನೇನು ತಪ್ಪು ಮಾಡಿದ್ದೇನೆ ? ಅದೇನಿಲ್ಲ. ನೀನು ಯಾರು ? ಎಲ್ಲಿಂದ

ವಿ. ಆರ್. ರಾವು



ಮಾತಾಡುತ್ತಿರುವಿ ? ನನ್ನ ಹೆಡಿಗೆಯ ಭಾರಕ್ಕೆ ನೀನೇ ಕಾರಣವೋ ? " ಎಂದು ಕೇಳಿದನು.

" ನಿನ್ನ ಅನುಮಾನ ನಿಜವೇ. ಆದರೆ ನಾನು ದೆವ್ವ ಭೂತವೇನಲ್ಲ. ವನದೇವತೆ. ನನಗೆ ಬಹಳ ಕಾಲದಿಂದ. ಮಾನವನ ತಲೆಯ ಮೇಲೆ ಹೊರಿಸಲ್ಪಟ್ಟು ಸವಾರಿ ಮಾಡುವ ಆಸೆ ಇತ್ತು. ಈಗ ನಿನ್ನಿಂದ ಆ ಕೋರಿಕೆ ತೀರಿತು. ನಿನಗೆ ಏನಾದರೂ ಉಪಕಾರ ಮಾಡಬೇಕೆಂದಿದ್ದೇನೆ. ಅಲ್ಲಿ ಕಾಣುವ ಅರಳೀ ಮರವೇ ನನ್ನ ನಿವಾಸಸ್ಥಾನ. ಅಲ್ಲಿಯ ವರೆಗೆ ಹೀಗೆಯೇ ನನ್ನನ್ನು ಹೊತ್ತುಕೊಂಡು ಹೋಗಿ ಬಿಡು " ಎಂದಳು ವನದೇವತೆ.

" ಹುಂ " ಎಂದು ಸೀತಾಪತಿ ಬಹಳ ಕಷ್ಟದಿಂದ ಅರಳಿಮರದವರೆಗೂ ವನದೇವತೆಯನ್ನು ಹೊತ್ತುಕೊಂಡು ಹೋದನು.

" ಇನ್ನು ಸಾಕು. ಸಂತೋಷವಾಯಿತು. ಹೆಡಿಗೆ ಕೆಳಗಿಳಿಸು " ಎಂದಳು ವನದೇವತೆ ಸಂತೋಷದಿಂದ.

ಸೀತಾಪತಿ ಹೆಡಿಗೆಯನ್ನು ಮೆಲ್ಲನೆ ಕೆಳಗಿಟ್ಟನು. ವನದೇವತೆ ಹೆಡಿಗೆಯಿಂದ ಇಳಿದು ಪ್ರತ್ಯಕ್ಷಳಾಗಿ, " ನಿನಗೇನು ಬೇಕೋ ಕೇಳು " ಎಂದಳು.

" ನನಗೆ ಏನೂ ಬೇಕಾಗಿಲ್ಲ. ಇಷ್ಟಕ್ಕೇ ಬಿಟ್ಟೆಯಲ್ಲ, ಅದೇ ದೊಡ್ಡದು " ಎಂದನು ಸೀತಾಪತಿ ತೇಕುತ್ತ.

"ಸಂದೇಹಿಸಬೇಡ ಸೀತಾಪತೀ. ನಿನಗೇನು ಬೇಕೋ ಕೇಳು," ಎಂದಳು ವನದೇವತೆ ಒತ್ತಾಯಿಸುವಂತೆ.

" ಹಾಗಾದರೆ ನನ್ನ ಖಾಲೀ ಹೆಡಿಗೆ ಒಳ್ಳೆಯ ಸವಿಯಾದ ಮಾವಿನ ಹಣ್ಣುಗಳಿಂದ ತುಂಬುವ ಹಾಗೆ ಮಾಡು. ನಾಳೆ ಇನ್ನೊಂದು ಊರಿನ ಸಂತೆಗೆ ಒಯ್ದು ಮಾರಿಕೊಳ್ಳುತ್ತೇನೆ " ಎಂದನು ಸೀತಾಪತಿ.

" ಇಷ್ಟು ಸಣ್ಣ ಇಷ್ಟವನ್ನು ಕೇಳುವೆಯಾ ? ಸರಿ. ನೀನು ನಿನ್ನ ಊರಿನ ಹತ್ತಿರ ಹೋಗುವಾಗ ನಿನ್ನ ಹೆಡಿಗೆ ಮಾವಿನ ಹಣ್ಣುಗಳಿಂದ ತುಂಬುತ್ತದೆ " ಎಂದಳು ವನದೇವತೆ.

ಸೀತಾಪತಿ ಬೇಸರದ ಮುಖ ಮಾಡಿಕೊಂಡು " ಕೇಳಿದ ಕೂಡಲೇ ಇಲ್ಲಿಯೇ ಕೊಡುವುದು ಬಿಟ್ಟು, ಊರು ಸೇರುವವರೆಗೆ ತಡಮಾಡುವುದೇಕೆ ? ಇದರಲ್ಲಿ ಏನೋ ಮೋಸವಿದೆ " ಎಂದನು.

ಆ ಮಾತು ಕೇಳಿ ವನದೇವತೆ ಗಟ್ಟಿಯಾಗಿ ನಗುತ್ತ, " ನೀನೊಬ್ಬ ಮುಗ್ಧ ಮನುಷ್ಯನೇ ಸರಿ. ನಿನ್ನ ಊರು ಇಲ್ಲಿಗೆ ಬಹಳ ದೂರವಿದೆ. ಅಷ್ಟು ದೂರ ಹಣ್ಣಿನ ಹೆಡಿಗೆ ಹೊರುವುದು ಕಷ್ಟವೆಂದು ಕೊಂಡು ಹಾಗೆ ಹೇಳಿದೆ. ಸರಿ, ನಿನ್ನ ಇಷ್ಟ. ನಿನ್ನ ಖಾಲೀ ಹೆಡಿಗೆ ಉತ್ತಮ ಜಾತಿಯ ಸವಿಮಾವಿನ ಹಣ್ಣುಗಳಿಂದ ಈಗಲೇ ತುಂಬುತ್ತದೆ " ಎಂದು ಹೇಳಿ ವನದೇವತೆ ಮಾಯವಾಗಿ ಹೋದಳು.

ಸೀತಾಪತಿ ಹಣ್ಣಿನ ಹೆಡಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಮನೆಗೆ ಹೋಗಿ ಸೇರಿದನು. ಹೆಡಿಗೆ ತುಂಬಾ ಇರುವ ಹಣ್ಣುಗಳನ್ನು ನೋಡಿ, ಅವನ ಹೆಂಡತಿ ನಾಗಮ್ಮ " ಅಯ್ಯಯ್ಯೋ!

ಇವತ್ತು ಸಂತೆಯಲ್ಲಿ ನಿಮ್ಮ ಹಣ್ಣು ಯಾರೂ ಕೊಂಡುಕೊಳ್ಳಲಿಲ್ಲವೇ ?" ಎಂದು ಕೇಳಿದಳು.

ಸೀತಾಪತಿ ನಡೆದ ಸಮಾಚಾರವನ್ನೆಲ್ಲಾ ಹೆಂಡತಿಯೊಂದಿಗೆ ಹೇಳಿದನು.

ಅದನ್ನು ಕೇಳಿ ಅವಳು ಕೋಪದಿಂದ ಸಂಕಟಪಡುತ್ತ, "ಎಂಥಾ ಬುದ್ಧಿ ನಿಮ್ಮದು ! ಎಷ್ಟು ಒಳ್ಳೇ ಅವಕಾಶ ಕೆಡಿಸಿಕೊಂಡು ಬಂದಿರಿ ? ವನದೇವತೆ ಬೇಕಾದ್ದು ಕೇಳಿಕೋ ಅಂದರೆ ನೀವು ಕೇಳಿದ್ದು ಹೆಡಿಗೆ ತುಂಬಾ ಮಾವಿನ ಹಣ್ಣು ! ಅದರ ಬದಲಿಗೆ ಬಂಗಾರವೋ, ಬೆಳ್ಳಿಯೋ ಕೇಳಬೇಕೆಂದು ಕಾಣಲೇ ಇಲ್ಲವಲ್ಲ ನಿಮಗೆ ! ನಮ್ಮ ದಾರಿದ್ರ್ಯ ತೀರುವ ಹಾಗಾಗುತ್ತಿತ್ತು. ಮಂಕು ಬುದ್ಧಿ !" ಎಂದು ಹಣೆ ಚಚ್ಚಿಕೊಂಡಳು.

ಆಮೇಲೆ ನಾಗಮ್ಮ ಹೆಡಿಗೆಯ ಒಂದು ಮಾವಿನ ಹಣ್ಣು ತೆಗೆದು ಚೂರಿಯಿಂದ ಒಂದು ತುಂಡು ಕೊಯಿದು ಬಾಯಿಗೆ ಹಾಕಿ, ಅತ್ಯಾಶ್ಚರ್ಯದಿಂದ "ಆಃ ! ಏನು ರುಚಿ ! ಇಷ್ಟೊಂದು ರುಚಿಯ ಹಣ್ಣು ನನ್ನ ಜನ್ಮದಲ್ಲಿ ತಿಂದಿಲ್ಲ. ತಿಂದು ನೋಡಿ ! ಒಂದೊಂದು ಹಣ್ಣು ಹತ್ತು ರೂಪಾಯಿ ಹೇಳಿದರೂ ಮುಗಿಬಿದ್ದು ಕೊಂಡುಕೊಂಡಾರು" ಎಂದಳು.

ಮರುದಿನ ಸೀತಾಪತಿ ವೆಂಕಟಪುರದ ಸಂತೆಗೆ ಹೋಗಿ ಆ ಹಣ್ಣುಗಳನ್ನು ಇಟ್ಟುಕೊಂಡು, ಕೇಳಿದವರಿಗೆ ಒಂದು ಹಣ್ಣಿಗೆ ಹತ್ತು ರೂಪಾಯಿ ಎಂದನು. ಅದನ್ನು ಕೇಳಿ ಜನರು ನಗುತ್ತಾ ಹೋದರು. ಕಡೆಗೆ ಒಬ್ಬ ಧನಿಕನು ಒಂದು ಹಣ್ಣನ್ನು ಕೊಂಡುಕೊಂಡು ರುಚಿ ನೋಡಿ, ಅತ್ಯಾನಂದಪಡುತ್ತ ಹತ್ತು ಹಣ್ಣುಗಳನ್ನು ಕೊಂಡುಕೊಂಡು ಹೋದನು. ಅದನ್ನು ನೋಡಿದವರು ಕ್ಷಣಮಾತ್ರದಲ್ಲಿ ಉಳಿದ ಎಲ್ಲಾ ಹಣ್ಣುಗಳನ್ನೂ ಕೊಂಡುಕೊಂಡರು. ಸೀತಾಪತಿಗೆ ಪ್ರತಿದಿನಕ್ಕಿಂತ ಹತ್ತುಪಾಲು ಹೆಚ್ಚಿಗೆ ಲಾಭ ಬಂದಿತು. ಬಹು ಸಂತೋಷದಿಂದ ಮನೆಗೆ ಸೇರಿದನು.



ಅನಂತರ ಸೀತಾಪತಿ, ಎಂದಿನಂತೆ ಒಬ್ಬ ಹಣ್ಣಿನ ತೋಟದ ಯಜಮಾನನಿಂದ ಒಳ್ಳೆಯ ಮಾವಿನ ಹಣ್ಣುಗಳನ್ನು ಕೊಂಡುಕೊಂಡು ವೆಂಕಟಪುರದ ಪಕ್ಕದ ಗ್ರಾಮಕ್ಕೆ ಹೋದನು. ಆದರೆ ಅವನ ಹತ್ತಿರವಿದ್ದ ಹಣ್ಣನ್ನು ಯಾರೂ ಕೊಂಡುಕೊಳ್ಳಲಿಲ್ಲ. ಎಲ್ಲರೂ ನಿನ್ನೆ ವೆಂಕಟಪುರಕ್ಕೆ ತಂದಂಥ ಅಪಾರ ರುಚಿಯ ಹಣ್ಣುಗಳನ್ನೇ ತರಲು ಹೇಳಿದರು. ಸೀತಾಪತಿಗೆ ದೊಡ್ಡ ಚಿಂತೆ ಹಿಡಿಯಿತು.

ಕತ್ತಲೆಯಾದ ಮೇಲೆ ಸೀತಾಪತಿ, ವನ ದೇವತೆಯ ಅರಳೀ ಮರದ ಹತ್ತಿರ ಹೋಗಿ, ದೊಡ್ಡ ಕಂಠದಿಂದ, "ಓ! ವನದೇವತೆಯೇ! ನೀನೇನೋ ನನಗೆ ಒಳ್ಳೆಯದಾಗಬೇಕೆಂದು ಕೊಟ್ಟದ್ದು ಕೆಟ್ಟದೇ ಆಯಿತು! ನನ್ನ ಬದುಕಿಗೇ ಮುಪ್ಪು ಬಂತು!" ಎಂದು ಕೂಗ ತೊಡಗಿದನು.

ವನದೇವತೆ ಅವನ ಮುಂದೆ ಪ್ರತ್ಯಕ್ಷಳಾಗಿ "ಏಕಪ್ಪಾ ? ಏನಾಯಿತಪ್ಪಾ?" ಎಂದು ಕೇಳಿದಳು.



ಸೀತಾಪತಿ ನಡೆದ ಸಂಗತಿಯನ್ನು ಹೇಳಿದನು. ವನದೇವತೆ ಅವನ ಮೇಲೆ ತುಂಬ ಸಹಾನುಭೂತಿಯುಳ್ಳವಳಾಗಿ, " ಹಾಗಾಯಿತೇ? ಪಾಪ! ಸರಿ. ಬೇರೇನಾದರೂ ಕೇಳು, ಕೊಡುತ್ತೇನೆ " ಎಂದಳು.

" ನನಗೆ ಒಂದು ಮಣ ಬಂಗಾರವನ್ನೇ ಕೊಟ್ಟುಬಿಡು! " ಎಂದನು ಸೀತಾಪತಿ.

" ಇಗೋ ಕೊಟ್ಟೆನು. ಬಹಳ ಜಾಗ್ರತೆಯಿಂದ ಕಾಪಾಡಿಕೋ " ಎಂದು ಹೇಳಿ ವನದೇವತೆ ಮಾಯವಾಗಿ ಹೋದಳು.

ಸೀತಾಪತಿ ಒಂದು ಮಣ ಬಂಗಾರವಿರುವ ಹೆಡಿಗೆಯನ್ನು ತಲೆಯ ಮೇಲೆ ಇಟ್ಟುಕೊಂಡು ಮನೆಯದಾರಿ ಹಿಡಿದನು. ಆದರೆ ದಾರಿಯಲ್ಲಿ ವೀರಭದ್ರನೆಂಬ ಕುಪ್ರಸಿದ್ಧ ಗಜ ಚೋರನು ಥಕ್ಕನೆ ಅವನ ಮುಂದೆ ಬಂದು, " ಒಳ್ಳೆಯ ಮಾತಿನಲ್ಲಿ ಮಾವಿನ ಹಣ್ಣಿನ ಹೆಡಿಗೆ ಕೆಳಗಿಟ್ಟು ಹಿಂದಿರುಗಿ ನೋಡದೆ ಓಡಿಹೋಗು " ಎಂದನು.

ಬಲಶಾಲಿಯಾದ ಸೀತಾಪತಿ ಧೈರ್ಯದಿಂದ ಇದಿರು ತಿರುಗಿ, " ನೀನು ವೀರಭದ್ರನಂಥವನ ಅಪ್ಪನಾದರೂ ಸರಿ. ನನ್ನ ಪ್ರಾಣ ಹೋದರೂ ಹೆಡಿಗೆಯಲ್ಲಿರುವುದನ್ನು ಕೊಡಲಾರೆ " ಎಂದು ವೀರಭದ್ರನನ್ನು ದೂಡಿದನು.

ಕೆಲವು ಮಾವಿನ ಹಣ್ಣುಗಳಿಗಾಗಿ ಪ್ರಾಣಬಿಡುವೆನೆನ್ನುವುದನ್ನು ಕೇಳಿ ವೀರಭದ್ರನು ಆಶ್ಚರ್ಯಪಡುತ್ತ, " ನಾನೇ ವೀರಭದ್ರ, ಗೊತ್ತಾ ! " ಎಂದು, ಸೊಂಟದಿಂದ ಕತ್ತಿಯನ್ನು ಹೊರಗೆ ತೆಗೆದನು. ಇಬ್ಬರೂ ಒಬ್ಬರಮೇಲೊಬ್ಬರು ಬಿದ್ದರು. ಮಹಾ ಬಲಶಾಲಿಯಾದ ಕಳ್ಳ ವೀರಭದ್ರನಿಗೆ ಸೀತಾಪತಿಯನ್ನು ಕೊಲ್ಲಲು ಇಷ್ಟವಿಲ್ಲ. ಅವನನ್ನು ಹೆದರಿಸಲು ಕತ್ತಿಯಿಂದ ಅವನ ಹೆಗಲಿಗೊಂದು ಸಣ್ಣ ಗಾಯ ಮಾತ್ರ ಮಾಡಿದನು.

ಅಷ್ಟಕ್ಕೇ ಸೀತಾಪತಿ ಕೆಟ್ಟದಾಗಿ ಕೂಗಿ, " ಎಲೋ ವೀರಭದ್ರಾ ! ಇಷ್ಟು ಬಂಗಾರ ದೋಚಿಕೊಂಡ ನೀನು ಎಂದಿಗೂ ಬದುಕಲಾರೆ ! " ಎಂದು ಅರಚಿ ಅಲ್ಲಿಂದ ಓಡಿಹೋದನು.

ವೀರಭದ್ರನು ಆ ಪ್ರಾಂತದಲ್ಲೆಲ್ಲಾ ಹೆಸರುವಾಸಿಯಾದ ಕಳ್ಳ, ಅವನ ಸಂಗತಿ ಪೂರಾ ಮಹಾರಾಜನಿಗೆ ಎಂದೋ ಗೊತ್ತಾಗಿತ್ತು. ಅವನನ್ನು ಕೊಂದೋ, ಕೊಲ್ಲದೆಯೋ ತಂದವರಿಗೆ ಲಕ್ಷ ರೂಪಾಯಿ ಬಹುಮಾನ ಕೊಡುವುದಾಗಿ ದೇಶದೊಳಗೆಲ್ಲಾ ಡಂಗುರ ಸಾರಿಸಿದ್ದನು.

ಸೀತಾಪತಿ ತನಗಾದ ಗಾಯಕ್ಕೆ ಮದ್ದು ಹಚ್ಚಿ ಕಟ್ಟುಹಾಕಿಕೊಂಡು, ಮರುದಿನ ಅರಳೀಮರದ ಹತ್ತಿರ ಹೋಗಿ ವನದೇವತೆಯನ್ನು ಕೂಗಿ ಕರೆದು, ನಡೆದ ಸಂಗತಿಯನ್ನೆಲ್ಲಾ ಹೇಳಿದನು.

ಅದನ್ನು ಕೇಳಿ ವನದೇವತೆಯ ಮುಖವು ಕೋಪದಿಂದ ಕೆಂಪಾಗಲು, " ನೀನೊಬ್ಬ ನಷ್ಟ ಜಾತಕದವನು. ಹಾಗಿಲ್ಲದಿದ್ದರೆ ನಾನು ಒಳ್ಳೆಯದಾಗಲೆಂದು

ಕೊಟ್ಟವುಗಳಿಂದ ಕೇಡು ಬರಲು ಸಾಧ್ಯವಿಲ್ಲ. ಇನ್ನು ನೀನು ಈ ಅರಳೀ ಮರದ ನೆರಳಿಗೂ ಬರಕೂಡದು. ನಡೆ" ಎಂದಳು.

ಅದನ್ನು ಕೇಳಿ ಸೀತಾಪತಿಯೂ ಕೋಪದಿಂದ, "ನೀನು ನನ್ನ ನೆತ್ತೀ ಮೇಲೆ ಹೆಡಿಗೇಲಿ ಕುಳಿತು ಸವಾರಿ ಮಾಡಿದ ಗಳಿಗೆಯಿಂದಲೇ ನನಗೆ ಈ ಕಷ್ಟಗಳು ಪ್ರಾರಂಭವಾದುವು. ನನಗೇನಾದರೂ ಸ್ವಲ್ಪ ಧನ ಕೊಡದೇ ಹೋದರೆ ನಾನು ಸುಮ್ಮನಿರಲಾರೆ!" ಎಂದು ಕೂಗಿದನು.

ಆ ಮಾತು ಕೇಳಿ ವನದೇವತೆ ಇನ್ನಷ್ಟು ಕೋಪದಿಂದ, "ಏನೋ ಅಲ್ಪ ಮಾನವಾ! ನನ್ನನ್ನು ಹೆದರಿಸುವಿಯಾ? ನಿನ್ನ ಪಾಪಿಷ್ಠ ಮುಖವನ್ನು ಇನ್ನೆಂದೂ ನನಗೆ ತೋರಿಸಬೇಡ. ಈ ದಿನ ನಿನ್ನ ಮುಖವನ್ನು ಮೊದಲು ಯಾರು ನೋಡುತ್ತಾರೋ ಅವರು ರಕ್ತಕಾರಿ ಸಾಯುತ್ತಾರೆ! ಹೋಗು ನಡೆ!" ಎಂದು ಶಪಿಸಿ ಮಾಯವಾದಳು.

ಸೀತಾಪತಿ ಭಾರಿ ದಿಗಿಲುಬಡಿದ ಮುಖದಿಂದ ಮನೆಯ ದಾರಿ ಹಿಡಿದನು. ಮೊದಲು ತನ್ನ ಇದಿರಿಗೆ ಬರುವವರು ಸಾಯುತ್ತಾರೆ, ಹಾಗೆ ಇದಿರು ಬರುವವರು ಊರಿನವರಾರಾದರೂ ಆಗಬಹುದು. ಕಡೆಗೆ ತನ್ನ ಹೆಂಡತಿಯೇ ಆಗಬಹುದು. ಈಗ ಏನು ಮಾಡಬೇಕು?

ಚಿಂತೆಯಿಂದ ತಲೆ ತಗ್ಗಿಸಿಕೊಂಡು ನಡೆಯುತ್ತಿದ್ದ ಸೀತಾಪತಿಗೆ, ಒಂದು ಮರದ ಹಿಂದಿನಿಂದ ದೊಡ್ಡದಾಗಿ ನಗುವಿನ ಶಬ್ದ ಕೇಳಿಸಿತು.

ಸೀತಾಪತಿ ಆ ಕಡೆಗೆ ನೋಡಿದಾಗ, "ಏನೋಯ್! ಹಣ್ಣಿನ ಬದಲಿಗೆ ಮತ್ತಿಷ್ಟು ಬಂಗಾರ ತರಲಿಲ್ಲವೇ?" ಎಂದು ಕೇಳುತ್ತ ಗಜಚೋರ ವೀರಭದ್ರನು ಅವನ ಮುಂದೆ ಬಂದು, ಹೋ ಎಂದು ಕೆಟ್ಟದನಿಯಿಂದ ಕೂಗಿ ನೆತ್ತರು ಕಾರುತ್ತಾ ನರಳಿ ಪ್ರಾಣಬಿಟ್ಟನು.

ಆಗ ಸೀತಾಪತಿಗೆ ಮಿಂಚು ಹೊಡೆದಂತಾಗಿ ಮಹಾರಾಜನ ಡಂಗುರವು ನೆನಪಾಯಿತು. ಅವನು ಕಳ್ಳನ ಶವವನ್ನು ತನ್ನ ಹೆಗಲ ಮೇಲೆ ಹಾಕಿಕೊಂಡು ಊರನ್ನು ತಲುಪಿದನು. ಅವನೊಡನೆ ಖಾಡಾಖಾಡಿ ಹೋರಾಡಿ ಗುದ್ದಿ ಕೊಂದೆನೆಂದು ಗ್ರಾಮಸ್ಥರೊಂದಿಗೆ ಹೇಳಿದನು.

ಒಂದು ವಾರದೊಳಗೆ ಮಹಾರಾಜನು ಸೀತಾಪತಿಯನ್ನು ಕರೆಯಿಸಿ ಗಜಚೋರ ವೀರಭದ್ರನನ್ನು ಕೊಂದುದಕ್ಕೆ ಲಕ್ಷ ರೂಪಾಯಿಗಳನ್ನು ಬಹುಮಾನ ಕೊಟ್ಟನು.

ವನದೇವತೆ ಕೋಪದಿಂದ ಶಪಿಸಿದ್ದೇ ವರವಾಗಿ ಪರಿಣಮಿಸಿದುದನ್ನು ನೋಡಿ ಸೀತಾಪತಿಗೆ ಬಹಳ ಸಂತೋಷವಾಯಿತು.





# ನರಕಪಾಲ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಒಂದು ಸಾರಿ ಬೋಧಿಸತ್ವನು ಒಂದು ವಾನರವಾಗಿ ಜನ್ಮತಾಳಿದನು. ನಂದೀಯನೆಂದು ಆ ವಾನರಕ್ಕೆ ಹೆಸರು. ನಂದೀಯನಿಗೆ ಒಬ್ಬ ತಮ್ಮನೂ ಹುಟ್ಟಿದನು. ಸಹೋದರರಿಬ್ಬರೂ ಹಿಮಾಲಯದ ಪ್ರಾಂತದಲ್ಲಿ ಎಂಬತ್ತು ಸಾವಿರ ಕೋತಿಗಳ ಗುಂಪಿಗೆ ನಾಯಕರಾಗಿ ಅಲ್ಲಿಯೇ ಇದ್ದರು. ಅವರಿಗೆ ತಮ್ಮ ಮನೆಯಲ್ಲಿ ಪೋಷಿಸಲ್ಪಡಬೇಕಾದ ತಾಯಿ ಇದ್ದಳು. ಅವಳಿಗೆ ಕಣ್ಣಿನ ದೃಷ್ಟಿ ಪೂರ್ತಿ ಹೋಗಿತ್ತು. ಅಂಧಳಾಗಿದ್ದಳು.

ಆದುದರಿಂದ ನಂದೀಯನೂ, ತಮ್ಮನೂ ಕೂಡಿ, ದಿನಾ ವನದಲ್ಲಿ ಸಿಗುವ ಒಳ್ಳೊಳ್ಳೆಯ ಹಣ್ಣುಗಳನ್ನು ತಂದು, ಗುಂಪಿನಲ್ಲಿದ್ದ ಸೇವಕ ಕೋತಿಗಳ ಮೂಲಕ ತಮ್ಮ ತಾಯಿಗೆ ಕಳುಹಿಸಿಕೊಡುತ್ತಿದ್ದರು. ಆದರೆ ದ್ರೋಹಿಗಳಾದ ಆ ಕೋತಿಗಳು ಆ ಫಲಗಳನ್ನು ತಾಯಿಗೆ ಕೊಡದೆ ತಾವೇ ಹಂಚಿಕೊಂಡು ತಿಂದು ಬಿಡುತ್ತಿದ್ದರು. ತಾಯಿಗೆ ಕೊಟ್ಟೆವೆಂದು ಸುಳ್ಳು ಹೇಳುತ್ತಿದ್ದರು. ಕುರುಡಿಯಾದ ತಾಯಿ ಕೋತಿ ಆಹಾರವಿಲ್ಲದೆ ಕಷ್ಟದಲ್ಲೇ ಇದ್ದಿತು.

ಒಂದು ದಿನ ನಂದೀಯನು ತಾಯಿಯನ್ನು ನೋಡಲು ಬಂದನು, ಸೊರಗಿ ಕಡ್ಡಿಯಂತಿರುವ ತಾಯಿಯನ್ನು ನೋಡಿ, ನಂದೀಯನು ಆಶ್ಚರ್ಯ ಪಟ್ಟು, "ಅಮ್ಮಾ, ಏಕೆ ಹೀಗೆ ಕೃಶಳಾಗಿರುವಿ? ನಾವು ದಿನಾ ನಿನಗೆ ಒಳ್ಳೊಳ್ಳೆಯ ಹಣ್ಣುಗಳನ್ನು ಕಳುಹಿಸುತ್ತಿದ್ದೆವು. ನೀನು ತಿನ್ನುವುದಿಲ್ಲವೇ ಅಮ್ಮಾ?" ಎಂದು ಕೇಳಿದನು.

"ಇಲ್ಲವಪ್ಪಾ ಕಂದಾ, ಯಾರೂ ನನಗೆ ಹಣ್ಣು ತಂದುಕೊಟ್ಟೇ ಇಲ್ಲ. ಹಾಗಿದ್ದರೆ ನಾನೇಕೆ ಹೀಗಿರುತ್ತಿದ್ದೆ?" ಎಂದಳು ತಾಯಿ ಹೀನ ಸ್ವರದಲ್ಲಿ.

ನಂದೀಯನು ಬಹಳ ಆಲೋಚನೆ ಮಾಡಿದನು. ನಿಜವು ಗೊತ್ತಾಯಿತು. ಕೂಡಲೇ ಅವನು ಹಿಮಾಲಯಕ್ಕೆ ಹೋಗಿ, ತಮ್ಮನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ತಮ್ಮಾ, ಅದಕ್ಕಾಗಿ ನಮ್ಮ ಸೇವಕರನ್ನು ಜರೆದಾಡಿ ಪ್ರಯೋಜನವಿಲ್ಲ. ನಮ್ಮ ತಾಯಿಯನ್ನು ನಾವೇ ನೋಡಿಕೊಳ್ಳಬೇಕಿತ್ತು. ಇನ್ನು ನಾನು ಮನೆಯಲ್ಲೇ ಇದ್ದು ಅಮ್ಮನನ್ನು ಪೋಷಿಸಿಕೊಂಡಿರುತ್ತೇನೆ. ನೀನು ನಾಯಕತ್ವ ವಹಿಸಿ ಗುಂಪನ್ನು ನೋಡಿಕೋ" ಎಂದನು.

ಅದಕ್ಕೆ ತಮ್ಮನು, "ಅಣ್ಣಯ್ಯಾ, ನಿನ್ನೊಂದಿಗೆ ನಾನೂ ಮನೆಯ ಹತ್ತಿರವೇ ಇದ್ದು ಅಮ್ಮನ ಪೋಷಣೆ ನೋಡುತ್ತೇವೆ. ಗುಂಪನ್ನು ಅವರೊಳಗೇ ಒಬ್ಬನು ನೋಡಿಕೊಳ್ಳುತ್ತಾನೆ" ಎಂದನು.

ಹೀಗೆ ಅಣ್ಣತಮ್ಮಂದಿರು ಒಂದೇ ಮನಸ್ಸಿನವರಾಗಿ ಮನೆಗೆ ಹೋದರು. ತಾಯಿಗೆ ಒಂದು ಅರಳೀ ಮರದ ಮೇಲೆ, ಒಳ್ಳೆಯ ವಾಸಸ್ಥಳವನ್ನು ಏರ್ಪಡಿಸಿಕೊಟ್ಟು, ಅವಳನ್ನು ಸಾವಿರ ಕಣ್ಣುಗಳಿಂದ ನೋಡುತ್ತ, ಕಾಪಾಡಿಕೊಂಡಿದ್ದರು.

ಹಾಗಿರುವಾಗ ಒಬ್ಬಾನೊಬ್ಬ ಬ್ರಾಹ್ಮಣ ಯುವಕನು ತಕ್ಷಶಿಲಾ ನಗರದಲ್ಲಿ ಖ್ಯಾತನಾದೊಬ್ಬ ಗುರುವಿನ ಹತ್ತಿರ ವಿದ್ಯಾಭ್ಯಾಸ ಮಾಡಿಕೊಂಡಿದ್ದನು. ವಿದ್ಯೆಗಳೆಲ್ಲ ಕಲಿತು ಪೂರ್ತಿಯಾದ ಮೇಲೆ ಗುರುವಿನ ಬಳಿಗೆ ಹೋಗಿ ಹೊರಟುಹೋಗಲು ಅನುಜ್ಞೆ ಕೇಳಿದನು.

ಗುರು ಈ ಶಿಷ್ಯನನ್ನು ನೋಡಿ, "ಅಪ್ಪಾ, ನೀನು ಇಲ್ಲಿ ಎಲ್ಲಾ ವಿದ್ಯೆಗಳನ್ನೂ ಕಲಿತಾಯಿತು ನಿಜ. ಸಂತೋಷವೇ. ನಿನ್ನದು ಸ್ವಲ್ಪ ತೀವ್ರ ಸ್ವಭಾವ. ಅವಸರಪಟ್ಟು ಎಂದಿಗೂ ಕ್ರೂರವಾದ ಕೆಲಸ ಮಾಡಬೇಡ. ಆಮೇಲೆ ಪಶ್ಚಾತ್ತಾಪಪಟ್ಟರೂ ಲಾಭವಿಲ್ಲ. ಇದೇ ನಿನಗೆ ನನ್ನ ಉಪದೇಶ" ಎಂದು ಹೇಳಿ ಹರಸಿ ಕಳುಹಿಸಿಕೊಟ್ಟನು.

ಆ ಬ್ರಾಹ್ಮಣ ಯುವಕನು ಕಾಶೀ ನಗರವನ್ನು ಸೇರಿದನು. ಮದುವೆ ಮಾಡಿಕೊಂಡು ಗೃಹಸ್ಥಾಶ್ರಮ ಸ್ವೀಕರಿಸಿದನು. ಮುಂದೆ ಅವನಿಗೆ ಹೊಟ್ಟೆ ಹೊರೆಯುವ ದಾರಿ ಕಾಣಲಿಲ್ಲ. ಕಡೆಗೆ ಉಪಾಯವಿಲ್ಲದೆ ಬಿಲ್ಲು ಬಾಣಗಳನ್ನು ಧರಿಸಿಕೊಂಡು ಬೇಡರ ವೃತ್ತಿಯನ್ನು ಹಿಡಿದು ಹೊರಟನು. ಪ್ರಾಣಿಗಳನ್ನೂ, ಪಕ್ಷಿಗಳನ್ನೂ ಹಿಡಿದು ಅವುಗಳ ಮಾಂಸವನ್ನು ವಿಕ್ರಯಿಸಿ, ಬಂದ ಹಣದಿಂದ ಕಾಲಯಾಪನೆ ಮಾಡಿಕೊಂಡಿದ್ದನು.



ಒಂದು ದಿನ ಆ ಬ್ರಾಹ್ಮಣ ಯುವಕನು ಎಷ್ಟು ತಿರುಗಿದರೂ ಒಂದು ಪ್ರಾಣಿಯೋ ಪಕ್ಷಿಯೋ ಅವನಿಗೆ ಸಿಗಲಿಲ್ಲ. ತೀರಾ ನಿರಾಶನಾಗಿ ಮನೆಗೆ ಹಿಂದಿರುಗಿಕೊಂಡಿದ್ದನು. ಒಂದು ಕಡೆಯಲ್ಲಿ ಅರಳೀ ಮರದ ಕಡೆಗೆ ಅವನ ದೃಷ್ಟಿ ಹೋಯಿತು. ಆ ಸಮಯದಲ್ಲಿ ನಂದೀಯನೂ, ಅವನ ತಮ್ಮನೂ, ತಾಯಿಗೆ ಫಲಗಳನ್ನು ತಿನ್ನಿಸಿ ತೃಪ್ತಿಪಡಿಸಿ, ತಾಯಿಯ ಹಿಂದಿನಿಂದ ಕುಳಿತುಕೊಂಡಿದ್ದರು.

ಆಗ ಬ್ರಾಹ್ಮಣ ಬೇಡನು ತಾಯಿ ಕೋತಿಯನ್ನೇ ನೋಡುತ್ತ ಬಾಣವನ್ನು ಗುರಿ ಇಡುತ್ತಿದ್ದನು. ಬರಿಗೈಯಿಂದ ಮನೆಗೆ ಹೋಗುವುದಕ್ಕೆ ಬದಲು, ಮುದಿ ಕೋತಿಯಾದರೂ ಸಿಕ್ಕಿತೆಂದು ಅವನ ಯೋಚನೆ. ಅದನ್ನು ನೋಡಿ ನಂದೀಯನು ತಮ್ಮನೊಂದಿಗೆ, "ನೋಡು ತಮ್ಮಾ, ಅವನು ನಮ್ಮ ತಾಯಿಗೆ ಗುರಿ ಇಟ್ಟಿದ್ದಾನೆ. ಅವಳ ಪ್ರಾಣಕ್ಕೆ ನಾನು ಅಡ್ಡ ನಿಲ್ಲುತ್ತೇನೆ. ನಾನು ಹೋದ ಮೇಲೆ

ಅವಳನ್ನು ನೀನೇ ಕಾಪಾಡಬೇಕು" ಎಂದು ಹೇಳಿ, ಬೇಗ ಬೇಗನೆ ಮರದಿಂದ ಇಳಿದು ಬಂದನು.

"ಅಯ್ಯಾ! ಬೇಡ ವೃತ್ತಿಯವನೇ! ನಮ್ಮ ತಾಯಿಯನ್ನು ಕೊಲ್ಲಬೇಡ. ಅವಳಿಗೆ ಬದಲು ನನ್ನ ಜೀವ ತೆಗೆ" ಎಂದು ಎದೆಯೊಡ್ಡಿದನು ನಂದೀಯ.

ಕಠಿಣಾತ್ಮನಾದ ಬ್ರಾಹ್ಮಣ ಬೇಡನು ಸರಿ ಎಂದು, ಅವನನ್ನು ನಿರ್ದಾಕ್ಷಿಣ್ಯವಾಗಿ ಕೊಂದುಬಿಟ್ಟನು.

ಆದರೆ ಬೇಡನು ಹೇಳಿದಂತೆ ನಡೆಯಲಿಲ್ಲ. ನಂದೀಯನು ಸತ್ತುಬಿದ್ದಮೇಲೆ, ಅವನ ಕುರುಡು ತಾಯಿಯ ಮೇಲೆ ಮತ್ತೆ ಬಾಣದ ಗುರಿ ಇಟ್ಟನು. ಇದನ್ನು ನೋಡಿ ಈ ಸಾರಿ ತಮ್ಮನು ಮರದಿಂದ ಬೇಗ ಬೇಗನೇ ಇಳಿದು ಬಂದು, ಬೇಡನೊಂದಿಗೆ ಅಣ್ಣನು ಹೇಳಿದ ಹಾಗೆಯೇ ಹೇಳಿದನು. ಅದಕ್ಕೂ ಸರಿ ಎಂದು ಒಪ್ಪಿ ಬ್ರಾಹ್ಮಣ ಬೇಡನು ತಮ್ಮನನ್ನೂ ಕೊಂದು ಹಾಕಿದನು.

"ನನಗೂ ನನ್ನ ಕುಟುಂಬದ ಖರ್ಚಿಗೂ ಈ ಎರಡು ಕೋತಿಗಳು ಸಾಕು" ಎಂದು ಬ್ರಾಹ್ಮಣ ಬೇಡನು ಮೊದಲು ಅಂದುಕೊಂಡನೇನೋ ನಿಜ. ಮರುಕ್ಷಣದಲ್ಲಿ ಅವನ ಮನಸ್ಸು ಅದಲು ಬದಲಾಯಿತು. ಸಿಕ್ಕುವುದನ್ನು ಏಕೆ ಬಿಡುವುದೆಂದುಕೊಂಡು, ಅವನು ದಯೆಯನ್ನೆಲ್ಲಾ ಬಿಟ್ಟು ಒಂದಿಷ್ಟೂ ಪಾಪಭೀತಿ ಇಲ್ಲದೆ, ಕುರುಡು ತಾಯಿ ಕೋತಿಯನ್ನೂ ಬಾಣದಿಂದ ಹೊಡೆದು ಕೊಂದು ಕೆಳಗೆ ಬೀಳಿಸಿದನು.

ಈ ರೀತಿಯಾಗಿ ಕೊಂದ ಮೂರು ಕೋತಿಗಳನ್ನೂ, ತನ್ನ ಕೋಲಿಗೆ ಕಟ್ಟಿ ಹೆಗಲ ಮೇಲೆ ನೇತಾಡಿಸಿಕೊಂಡು ಅತ್ಯುತ್ಸಾಹದಿಂದ ಮನೆಯ ದಾರಿ ಹಿಡಿದನು. ಊರಿನ ಮೇರೆಯನ್ನು ತಲುಪುವಷ್ಟರಲ್ಲಿ, ಸಿಡಿಲುಬಿದ್ದು ಅವನ ಮನೆ ಸುಟ್ಟು ಹೋಗುತ್ತಿದೆ ಎಂದೂ, ಹೆಂಡತಿಯೂ ಇಬ್ಬರು ಮಕ್ಕಳೂ ಮನೆಯೊಳಗೇ ಸಿಕ್ಕಿಬಿದ್ದಿರುವರೆಂದೂ ಗೊತ್ತಾಯಿತು.

ಅದು ತಿಳಿದ ಕೂಡಲೇ ಅವನು ಮಹಾ ದುಃಖದಿಂದ ಎದೆ ಬಡೆದುಕೊಳ್ಳುತ್ತ, ಮನೆಗೆ ಓಡಿದನು. ಅವನು ಸಾಹಸ ಮಾಡಿ ಮನೆಯೊಳಗೆ ಹೊಕ್ಕಾಗ, ಅವನು ನಿಂತ ಜಾಗದ ಭೂಮಿ ಥಕ್ಕನೆ ಸೀಳಿತು. ಅವನು ಪಾತಾಳಕ್ಕೆ ಹೋಗುತ್ತ ಈ ಸಂಗತಿಯನ್ನು ಜ್ಞಾಪಕಕ್ಕೆ ತಂದುಕೊಂಡನು.

"ನನ್ನ ಗುರುಗಳು ಅಂದೇ ಹೇಳಿದರು, ಕ್ರೂರವಾದ ಕೆಲಸ ಮಾಡಬೇಡವೆಂದು, ಪಶ್ಚಾತ್ತಾಪಪಟ್ಟರೂ ಪ್ರಯೋಜನವಿಲ್ಲವೆಂದರು. ನಾನೇ ಮಾಡಿಕೊಂಡ ತಪ್ಪುಗಳಿಗೆ ಈಗಲೇ ಪ್ರಾಯಶ್ಚಿತ್ತ ಸಿಕ್ಕಿತು" ಎನ್ನುತ್ತಾ ಕಣ್ಮರೆಯಾಗಿ ನರಕಕ್ಕಿಳಿದು ಹೋದನು.





# ಅಧಿಕಾರದ ಮಾರ್ಪಾಡು

ಬ್ರಿಟಿಷ್ ಸೇನೆಗಳು ಢಿಲ್ಲಿಯನ್ನು ಹಿಡಿದುಕೊಂಡ ಮೇಲೆ ಸಿಪಾಯಿಗಳ ಬಂಡಾಯವು ಅಂತಿಮ ದಶೆಗೆ ಬಂತು. ಬ್ರಿಟಿಷ್ ಸೇನೆಗಳು ಢಿಲ್ಲಿಯನ್ನು ಮುತ್ತಿಗೆ ಹಾಕಿದ ಕೆಲವು ಗಂಟೆಗಳೊಳಗೆ ಜಾನ್ ನಿಕಲ್‌ಸನ್ ಎಂಬ ಬ್ರಿಟಿಷ್ ಸೇನಾ ನಾಯಕನು ಬಂಡಾಯಗಾರರ ತುಪಾಕಿಗೆ ಬಲಿಯಾಗಿಬಿದ್ದನು.

ಬಂಡಾಯಗಾರರು ತಮ್ಮ ಚಕ್ರವರ್ತಿಯಾಗಿ ಗುರುತಿಸಿದ ವೃದ್ಧನಾದ ಆಖೈರಿಯ ಮೊಗಲ್ ಪಾಲಕ ಬಹದ್ದೂರ್ ಷಾ ನಿಃಸಹಾಯಕನಾದನು. ತಮ್ಮ ಪೂರ್ವಿಕನಾದ ಹುಮಾಯೂನನ ಗೋರಿಯ ಸಮೀಪದಲ್ಲಿ ಬಹದ್ದೂರ್ ಷಾ. ದುಷ್ಟನಾದ ಮೇಜರ್ ಹಡ್ಸನ್ನನ ಮುಂದೆ ಶರಣಾಗತನಾದನು.





ಗೋರಿಯ ಹಿಂದೆ ಅಡಗಿಕೊಂಡಿದ್ದ ಬಹದ್ದೂರ್ ಷಾನ ಮಗಂದಿರಿಬ್ಬರನ್ನೂ ಕಂಡು ಹಿಡಿದ ಮೇಜರ್ ಹಡ್ಸನ್, ಅವರನ್ನು ಹಿಡಿದು ವಿವಸ್ತ್ರರನ್ನಾಗಿ ಮಾಡಿ, ಭಯಭ್ರಾಂತರಾದ ಪ್ರಜೆಗಳ ಸಮಕ್ಷಮದಲ್ಲಿ ನಿರ್ದಾಕ್ಷಿಣ್ಯದಿಂದ ಸ್ವತಃ ಗುಂಡು ಹೊಡೆದು ಕೊಂದನು.



ಬಹದ್ದೂರ್ ಷಾ ರಂಗೂನಿಗೆ ಸಾಗಿಸಲ್ಪಟ್ಟು ಅಲ್ಲಿ ೧೮೬೨ನೇ ವರ್ಷದಲ್ಲಿ ಸೆರೆಯಲ್ಲಿಯೇ ಸತ್ತನು. ಅಲ್ಲಿಗೆ ಮೊಗಲ್ ಸಾಮ್ರಾಜ್ಯವು ಅಂತರಿಸಿತು. ಕೊಟ್ಟಕೊನೆಗೆ ಉಳಿದ ಅವನ ಮಗಂದಿರಿಬ್ಬರೂ ಬಡತನದಲ್ಲಿ ನರಳಿ ಕೊಂಡಿದ್ದರು.

ಸಿಪಾಯಿಗಳ ದಂಗೆ ಬಂಡಾಯಗಳೆಲ್ಲ ವಿಫಲವಾದ ಮೇಲೆ ಕಂಪೆನಿಯ ಸೈನಿಕರು ಭಾರತೀಯರ ಮೇಲೆ ಹಗೆ ಹಿಡಿದು ಹಿಂಸಿಸ ತೊಡಗಿದರು. ಏನೂ ಅರಿಯದ ಗ್ರಾಮ ಪ್ರಜೆಗಳನ್ನು ಕೊಂದು ಮರಗಳಲ್ಲಿ ನೇತಾಡ ಕಟ್ಟಿದರು. ಗುಂಡು ಹೊಡೆದು ಕೊಂದರು. ಲೆಕ್ಕವಿಲ್ಲದಷ್ಟು ಗ್ರಾಮಗಳನ್ನು ಸುಟ್ಟರು.






ಭಾರತದೇಶದಲ್ಲಿ ಕಂಪೆನಿಯ ಪಾಲನೆಯನ್ನು ಕುರಿತು ಇಂಗ್ಲಾಂಡಿನಲ್ಲಿ ವಿಮರ್ಶೆಗಳು ಹೊರಟವು. ಭಾರತದೇಶದ ಪರಿಪಾಲನೆಯ ಅಧಿಕಾರವನ್ನು ವಿಕ್ಟೋರಿಯಾ ರಾಣಿಯ ಹೆಸರಿನ ಮೇಲೆ ತಾನೇ ವಶಪಡಿಸಿಕೊಳ್ಳಬೇಕೆಂದು ಪ್ರಭುತ್ವದ ನಿರ್ಣಯವಾಯಿತು. ವಿಕ್ಟೋರಿಯಾ ರಾಣಿ 'ಕೈಜಾರ್-ಇ-ಹಿಂದ್' ಬಿರುದನ್ನು ಸ್ವೀಕರಿಸ ಬೇಕಾಗಿ ಬಂತು.

ಕಂಪೆನಿಯಿಂದ ನಿಯಮಿಸಲ್ಪಟ್ಟ ಗವರ್ನರ್ ಜನರಲ್ (ರಾಣಿಯ ಪ್ರತಿನಿಧಿ) ವೈಸ್ರಾಯ್ ಆದನು. ೧೮೫೮ ನೇ ವರ್ಷ ನವಂಬರ್ ಒಂದನೇ ತಾರೀಕಿನ ದಿನ ಅಲಹಾಬಾದಿನಲ್ಲಿ ಸಭೆ ನಡೆಸಿ, ವೈಸ್ರಾಯ್ ಕಾನಿಂಗ್ ಪ್ರಭು ಅಧಿಕಾರದ ಮಾರ್ಪಾಡನ್ನು ಪ್ರಕಟಿಸಿದನು.





ಆದಾದನಂತರ ಪರಿಪಾಲನೆಯ ವ್ಯವಹಾರಗಳಲ್ಲಿ ಅನೇಕ ಮಾರ್ಪಾಡುಗಳನ್ನು ಪ್ರವೇಶಗೊಳಿಸಲಾಯಿತು. ಕಲಕತ್ತಾ, ಮದ್ರಾಸು, ಬೊಂಬಾಯಿ ಪಟ್ಟಣಗಳಲ್ಲಿ ಉನ್ನತ ನ್ಯಾಯಸ್ಥಾನಗಳು ಸ್ಥಾಪಿಸಲ್ಪಟ್ಟುವು. ವಿದ್ಯೆಗೆ ಪ್ರಮುಖ ಸ್ಥಾನ ನೀಡಲಾಯಿತು. ವಿದ್ಯೆಗಳ ವ್ಯಾಪ್ತಿಗಾಗಿ ವಿವಿಧ ಪ್ರಾಂತಗಳಲ್ಲಿ ವಿದ್ಯಾಶಾಖೆಗಳು ಏರ್ಪಡಿಸಲ್ಪಟ್ಟವೆ.

೧೮೮೦ ನೇ ವರ್ಷದಲ್ಲಿ ರಿಪ್ಪನ್ ಪ್ರಭು ಹೊಸ ವೈಸ್ರಾಯ್ ಆಗಿ ಬಂದನು. ಅವನು ಒಳ್ಳೆಯ ಮನಸ್ಸಿನ, ಆದರ್ಶಭಾವನೆಗಳುಳ್ಳ, ಸಂಸ್ಕೃತನಾಗಿದ್ದ. ಅವನು ಬಂದ ಮೇಲೆ ಪ್ರಾಂತೀಯ ಸಂಘಗಳು, ಪುರಪಾಲಕ ಸಂಘಗಳು ಏರ್ಪಟ್ಟುವು. ಪರಿಪಾಲನೆಯ ವ್ಯವಹಾರಗಳಲ್ಲಿ ಭಾರತೀಯರಿಗೆ ಕೂಡಾ ಕೆಲವು ಚಿಕ್ಕ ಚಿಕ್ಕ ಹಕ್ಕುಗಳನ್ನು ನೀಡಲಾಯಿತು.





ಅದಕ್ಕೆ ಮೊದಲು ಆರೋಪಿಯಾದ ಆಂಗ್ಲೇಯನನ್ನು ವಿಚಾರಣೆ ಮಾಡುವ ಅಧಿಕಾರವು ಭಾರತೀಯರಿಗೆ ಇರಲಿಲ್ಲ. ಈ ಪಕ್ಷಪಾತದ ವೈಖರಿ ರಿಪ್ಪನ್ ಪ್ರಭುವಿಗೆ ಹಿಡಿಸಲಿಲ್ಲ. ಅವನು ಬ್ರಿಟಿಷ್ ನ್ಯಾಯಾಧಿಕಾರಿಗಳಿಗೂ ಭಾರತೀಯ ನ್ಯಾಯಮೂರ್ತಿಗಳಿಗೂ ಸಮಾನ ಹಕ್ಕು ಕೊಡಲು ನಿಶ್ಚಯಿಸಿದನು. ಇದು ಭಾರತದಲ್ಲಿರುವ ಆಂಗ್ಲೇಯರ ಕೋಪಕ್ಕೆ ಕಾರಣವಾಯಿತು.

ವಿರಕ್ತಿಗೊಂಡ ರಿಪ್ಪನ್ ಪ್ರಭು ತನ್ನ ಪದವಿಗೆ ರಾಜೀನಾಮೆ ಕೊಟ್ಟು ಇಂಗ್ಲೆಂಡಿಗೆ ಹೊರಟನು. ಆತನಲ್ಲಿದ್ದ ಪ್ರಾಮಾಣಿಕತೆಗೂ, ಸ್ನೇಹಭಾವನೆಗಳಿಗೂ ಆನಂದಿಸಿದ ಭಾರತೀಯರು ಅವನಿಗೆ ಘನ ರೀತಿಯಲ್ಲಿ ಬೀಳ್ಕೊಡುಗೆ ಕೊಟ್ಟರು. ಅನಂತರ ಭಾರತೀಯರು ಒಂದು ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಬೇಕಾದ ಅಗತ್ಯವನ್ನು ಕ್ರಮವಾಗಿ ತಿಳಿಯ ತೊಡಗಿದರು.





೧೮೮೫ ನೇ ವರ್ಷದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿಸಲ್ಪಟ್ಟಿತು. ಕಾಂಗ್ರೆಸ್ಸಿನ ಪ್ರಥಮ ಮಹಾಸಭೆ ಕಲಕತ್ತಕ್ಕೆ ಸೇರಿದ ಸುಪ್ರಸಿದ್ಧ ನ್ಯಾಯವಾದಿಯಾದ ಡಬ್ಲ್ಯು. ಸಿ. ಬೆನರ್ಜೀಯ ಅಧ್ಯಕ್ಷತೆಯಲ್ಲಿ ಬೊಂಬಾಯಿಯಲ್ಲಿ ಸಮಾವೇಶವಾಯಿತು. ಪದವಿಯಿಂದ ವಿರಮಿಸಿದ ಬ್ರಿಟಿಷ್ ಅಧಿಕಾರಿ ಅಲನ್ ಅಕ್ಟಾವಿಯನ್ ಹ್ಯೂಮ್, ರಾಷ್ಟ್ರೀಯ ಕಾಂಗ್ರೆಸ್ ಆವಿರ್ಭವಿಸಲು ತುಂಬಾ ಪ್ರೇರಣೆಯನ್ನುಂಟು ಮಾಡಿದನು.



# ಶಿಥಿಲ ಕುಟೀರ

**ಪೂ**ರ್ವ ಕಾಲದಲ್ಲಿ ಅನಂಗ ರಾಜ್ಯವನ್ನು ಚಕ್ರಧರ ಮಹಾರಾಜನು ಆಳಿಕೊಂಡಿದ್ದನು. ಆತನು ವಾಸ ಮಾಡಿಕೊಂಡಿದ್ದ ರಾಜಭವನವು ಏಳು ತಲೆಮಾರುಗಳ ಕೆಳಗೆ ನಿರ್ಮಿಸಲ್ಪಟ್ಟಿತ್ತು. ಪೂರ್ವಿಕರು ಆ ಭವನವನ್ನು ಮತ್ತೆಷ್ಟು ಹಿಂದಿನ ಕಾಲದಲ್ಲಿ ನಿರ್ಮಿಸಿದರೋ ಏನೋ! ಆ ಭವನಕ್ಕೆ ದುರಸ್ತಿ ಎಂಬ ಮಾತೇ ಗೊತ್ತಿರಲಿಲ್ಲ. ಎಲ್ಲೆಲ್ಲಿ ಶಿಥಿಲವಾಯಿತೋ ಅಲ್ಲೆಲ್ಲ ಹಾಗೆ ಹಾಗೇ ಇದ್ದುಬಿಟ್ಟಿತ್ತು. .ಅದನ್ನು ಸರಿಪಡಿಸಬೇಕೆಂದು ಯಾರಿಗೂ ತೋರಲಿಲ್ಲ.

ಚಕ್ರಧರನ ಕಾಲದಲ್ಲಿ ಆ ಭವನವನ್ನು ನೋಡುವುದೇ ಕಷ್ಟವಾಯಿತು. ನೋಡಿದವರಿಗೆ ಅಸಹ್ಯ ತಟ್ಟುತಿದ್ದಿತು. ಇಷ್ಟು ಕಾಲವಾದ ಮೇಲೆ ಈಗ ದುರಸ್ತಿಯ ಕೆಲಸಕ್ಕೆ ತಲೆ ಹಾಕಿಬಿಟ್ಟರೆ ಅದು ಬಹಳ ಕಿರುಕುಳವನ್ನುಂಟುಮಾಡುತ್ತದೆಂದು ರಾಜನಿಗೆ ತೋರುತ್ತಿದ್ದಿತು. ದಿನಾ ಅದನ್ನು ಕುರಿತು ಯೋಚಿಸುವುದೂ ಉಪೇಕ್ಷೆ ಮಾಡುವುದೂ ಆಯಿತು. ಹಿಂದಿನವರ ಮೇಲೆ ತಪ್ಪುಹಾಕಿ ಸುಮ್ಮನಾಗಿಬಿಡುವನು. ಮತ್ತೆ ತನ್ನಂತೆ ಬರುತ್ತಿತ್ತು ಅದೇ ಯೋಚನೆ. ದಿನಾ ಯೋಚಿಸುವ ವಿಷಯವು ಕಡೆಗೆ ರೋಸಿಕೆ ಹುಟ್ಟಿಸುತ್ತದೆ, ಆ ಮನೆಯಲ್ಲೇ ಇರುವಾಗ ಯೋಚನೆ ಬಾರದಿರುವುದೂ ಇಲ್ಲ. ಕಟ್ಟ ಕಡೆಗೆ ಒಂದು ನಿಶ್ಚಯಕ್ಕೇ ಬಂದನು. ಅದನ್ನು ದುರಸ್ತಿ ಮಾಡಿದರೆ ಎಷ್ಟು ಖರ್ಚಾಗುವುದೆಂದು ತನ್ನೊಳಗೇ ಲೆಕ್ಕಹಾಕಿ ನೋಡಿದನು. ದುರಸ್ತಿ ಮಾಡುವ ಖರ್ಚಿಗಿಂತ, ಒಳ್ಳೆಯ ಜಾಗ ನೋಡಿ, ಹೊಸ ರಾಜಭವನ ಕಟ್ಟಿಸುವುದೇ ಉತ್ತಮವೆಂಬ ನಿಶ್ಚಯಕ್ಕೆ ಬಂದನು.

ಕೂಡಲೇ ಚಕ್ರಧರ ಮಹಾರಾಜನು ತನ್ನ ಪರಿವಾರದವರನ್ನು ಕರೆದುಕೊಂಡು ಯೋಗ್ಯವಾದ ಸ್ಥಳ ಹುಡುಕಲು ಹೊರಟನು. ವಿಸ್ತಾರವಾದ ಪ್ರಶಸ್ತ ಸ್ಥಳ ಯಾವುದೆಂದು ಹುಡುಕುತ್ತಾ ನಾಲ್ಕು ಸುತ್ತಲೂ ನಡೆದನು. ಹಾಗೆ ಹೋಗುತ್ತಾ ಅವರೆಲ್ಲ ಒಂದು ನದಿಯ ತೀರ ಪ್ರದೇಶವನ್ನು ತಲಪಿದರು.

ಆ ಪ್ರದೇಶವು ಚಕ್ರಧರ ಮಹಾರಾಜನಿಗೆ ಆತ್ಮಾನಂದವನ್ನುಂಟುಮಾಡಿತು. ಅವನ ಮುಖದಲ್ಲಿ ಹೊಸ ಕಾಂತಿ ಬೆಳಗಿತು. ಸಮೀಪದಲ್ಲಿ ಜಲವಿಹಾರಕ್ಕೆ ಯೋಗ್ಯವಾದ ನದಿಯೂ ಇದೆ. ವಿಸ್ತೃತವಾದ ಈ ಪ್ರಾಂತದಲ್ಲಿಯೇ ಹೊಸ ಭವನವನ್ನು ನಿರ್ಮಿಸ




ಬೇಕೆಂದು ಕೂಡಲೇ ನಿಶ್ಚಯಿಸಿದನು. ಈ ಪ್ರದೇಶವು ಯಾರದು? ಏನು ಕತೆ? ಎಂಬುದನ್ನೆಲ್ಲಾ ವಿಚಾರಿಸಿ ಬರುವಂತೆ ಸೇವಕರನ್ನು ಕಳುಹಿಸಿದನು. ಅವರು, "ಯಾರು ಈ ಸ್ಥಳದ ಹಕ್ಕುದಾರ ?" ಎಂದು ಆಗಾಗ ಕೂಗುತ್ತಾ, ಅತ್ತಿತ್ತ ನೋಡಿದರು.

ಸಮೀಪದಲ್ಲಿ ಒಂದು ಕಡೆ ಮರಗಳ ತೋಟದ ಸಂದಿನಲ್ಲಿ ಯಾವುದೋ ಒಂದು ಮನೆಯಿರುವು ದನ್ನು ನೋಡಿ, ರಾಜನೂ ಉಳಿದವರೂ ಅಲ್ಲಿಗೆ ಹೋದರು. ತೋಟದ ನಡುವೆ ಅದೊಂದು ಚಿಕ್ಕ ಕುಟೀರವಾಗಿತ್ತು.

ಆ ಕುಟೀರದಲ್ಲಿ ತೊಂಬತ್ತು ವಯಸ್ಸಿನ ಮುದುಕಿ ಯೊಬ್ಬಳಿದ್ದಳು. ತನ್ನ ಕುಟೀರದ ಬಳಿಗೆ ಬಂದವರು ರಾಜನೂ ಪರಿವಾರವೂ ಎಂದು ತಿಳಿದು, ಅವಳು ಬಹಳ ಸಂತೋಷವನ್ನು ಪ್ರಕಟಿಸಿ ಅವರನ್ನು ತಕ್ಕ ಮರ್ಯಾದೆಯಿಂದ ಕರೆದು ಆದರಿಸಿದಳು. "ನೀವೆಲ್ಲಾ ಏಕೆ ಹೀಗೆ ದಯಮಾಡಿದಿರಿ ಅಪ್ಪಗಳಿರಾ ? ಅಯ್ಯ ಗಳಿರಾ? ನನ್ನಿಂದ ನಿಮಗೇನಾದರೂ ಆಗಬೇಕೆ ?" ಎಂದು ಬೊಚ್ಚು ಬಾಯಿ ನಗುವಿನೊಂದಿಗೆ ಕೇಳಿದಳು.

ಆಗ ಮಂತ್ರಿ ಅವಳೊಂದಿಗೆ, "ಅವ್ವಾ! ಈ ಪ್ರದೇಶವು ನಮ್ಮ ಪ್ರಭುಗಳಿಗೆ ಬಹಳ ಚೆನ್ನಾಗಿದೆ ಯೆಂದು ಕಾಣುತ್ತಾ ಇದೆ. ರಾಜಭವನವನ್ನು ನಿರ್ಮಿಸಿಕೊಳ್ಳಲು ಈ ಪ್ರದೇಶವು ಅತ್ಯುತ್ತಮ ವಾಗಿದೆ ಎನ್ನುತ್ತಾರೆ. ರಾಜಭವನ ನಿರ್ಮಿಸಬೇಕಾದರೆ ವಿಶಾಲವಾದ ಜಾಗ ಬೇಕು. ಆದುದರಿಂದ ದಾರಿ ಯಲ್ಲಿರುವ ನಿನ್ನ ಕುಟೀರವನ್ನು ತೆಗೆದು ಹಾಕ ಬೇಕಾಗುತ್ತದೆ. ಇದನ್ನು ತಿಳಿಸಲಿಕ್ಕೇ ಬಂದಿದ್ದೇವೆ. ಈ ಸಂಬಂಧವಾಗಿ ನಿನ್ನ ಅಪೇಕ್ಷೆ ಏನಾದರೂ ಇದ್ದರೆ ಹೇಳು" ಎಂದು ಹೇಳಿದನು.

ಅದನ್ನು ಕೇಳಿ ಮುದುಕಿ, "ಅಯ್ಯೋ, ನನ್ನಪ್ಪ ಗಳಿರಾ ! ಮಹಾರಾಜರು ಭವನ ಕಟ್ಟಿಕೊಳ್ಳುವುದಕ್ಕೆ ನಾನು ಬೇಡವೆನ್ನುವೆನೇ ? ಅದಕ್ಕಿಂತ ಸಂತೋಷ ವಾದುದು ಇನ್ನೇನಿದೆ? ಆದರೆ ಈ ಕುಟೀರವು ಇಂದು ನಿನ್ನೆಯದೇನಲ್ಲ. ಏಳು ತಲೆಮಾರಿನವರ ಮನೆಯಿದು, ನನ್ನ ಪೂರ್ವಿಕರು ಕಟ್ಟಿಸಿದ್ದು. ಈಗ ನನ್ನ ತಲೆಮಾರಿನಲ್ಲಿ ಏನೋ ಬಡತನ ಬಂದು, ರೋಗರುಜಿನೆಗಳಿಂದ ನಾನೊಬ್ಬಳು ಬದುಕಿದ್ದೇನೆ. ಇದನ್ನು ದುರಸ್ತಿ ಮಾಡುವ ಸ್ಥಿತಿಯಲ್ಲಿ ನಾನಿಲ್ಲ, ನಿಜ. ಆದರೆ ಇದನ್ನು ಎಂದಿಗೂ ಬಿಟ್ಟುಕೊಡ ಲಾರೆನು. ನನ್ನ ಮರಿ ಮೊಮ್ಮಗಳೊಬ್ಬಳು ಗಂಡ ನೊಂದಿಗೆ ಪರವೂರಿನಲ್ಲಿದ್ದಾಳೆ. ನಾನೂ ಗಟ್ಟಿಮುಟ್ಟಾ ಗಿದ್ದೇನೆ. ಎಂದಾದರೂ ಇದನ್ನು ದುರಸ್ತಿಮಾಡಿಸಿ ಆ ಮರಿ ಮೊಮ್ಮಗಳಿಗೇ ಉಳಿಸಿ ಕೊಡಬೇಕೆಂದಿ ದ್ದೇನೆ. ಇದೇ ನನ್ನ ಅಪೇಕ್ಷೆ. ಈ ಸ್ಥಳವನ್ನು ಮಾತ್ರ ಕೇಳಬೇಡಿರಪ್ಪಾ" ಎಂದಳು.

ಇದನ್ನು ಕೇಳಿ ಮಂತ್ರಿ ಆ ವೃದ್ಧಳೊಂದಿಗೆ, "ಅವ್ವಾ, ನೀನು ಹೇಳಿದ ಮಾತೆಲ್ಲಾ ಚೆನ್ನಾಗೇ ಇದೆ ಬಿಡೂ. ಆದರೆ ನಿನ್ನಿಂದಾಗದ ಏನೇನೋ

ಊಹನೆಗಳನ್ನಿಟ್ಟುಕೊಂಡು. ಇಲ್ಲಿಂದ ಕದಲಲಾರೆ ನೆನ್ನುವುದು ನ್ಯಾಯವೇ ಅಲ್ಲ. ಹಾಗೆ ಹೇಳುವುದು ನಿನ್ನ ಅರಳುಮರಳುತನವೆನಿಸುತ್ತದೆ. ಈ ಒಂದು ಜಾಗವನ್ನು ಬಿಟ್ಟುಕೊಟ್ಟೆಯಾದರೆ ಮಹಾರಾಜರು ತಮ್ಮ ರಾಜ್ಯದಲ್ಲಿ ನಿನಗೆ ಎಲ್ಲಿ ಬೇಕೋ ಅಲ್ಲಿ ಇದಕ್ಕಿಂತ ಹತ್ತುಪಾಲು ವಿಸ್ತೀರ್ಣವಾದ ಸ್ಥಳದಲ್ಲಿ ಮನೆ ಕಟ್ಟಿಸಿಕೊಡುತ್ತಾರೆ. ಇಲ್ಲಾ ಸ್ಥಳ, ಮನೆ ಯಾವುದೂ ಬೇಡ, ಹಣವೇ ಬೇಕಾಗಿದ್ದರೆ ಕೇಳಿ ಬಿಡು. ಸ್ವಲ್ಪವೂ ಶಂಕಿಸಬೇಕಾಗಿಲ್ಲ. ನಿನಗೆ ಬೇಕಾದಷ್ಟು ಧನವನ್ನು ಈಗಲೇ ತರಿಸಿಕೊಡಿಸು ತ್ತೇನೆ" ಎಂದನು.

ಅದನ್ನು ಕೇಳಿ ಆ ಮುದುಕಿ, "ಅಪ್ಪಾ, ನಿನ್ನ ದೊಡ್ಡ ದೊಡ್ಡ ಜಾಗವೂ ನನಗೆ ಬೇಡ, ನಿನ್ನ ಧನ ರಾಶಿಗಳ ಅಗತ್ಯವೂ ನನಗಿಲ್ಲ. ಲಕ್ಷ ಬಂದರೂ ಹೋದರೂ ಈ ಕುಟೀರದಿಂದ ಮಾತ್ರ ನಾನು ಕದಲಲಾರೆನು. ನನ್ನ ಹಿರಿಯರ ಜಾಗವೇ ನನಗೆ ದೊಡ್ಡದು. ಮಹಾರಾಜರಿಗೆ ಬೇಕಾಗಿದ್ದರೆ ಈ ಕುಟೀರದ ಗೋಜಿಗೆ ಬಾರದೆ, ಆ ವಿಶಾಲ ಜಾಗದಲ್ಲಿ ಎಲ್ಲಿ ಬೇಕಾದರೂ ಮನೆ ಕಟ್ಟಿಕೊಳ್ಳಲು ಹೇಳಿರಪ್ಪ" ಎಂದಳು ಸ್ವಲ್ಪವೂ ಭಯವಿಲ್ಲದೆ.

ಅದನ್ನು ಕೇಳಿ ರಾಜನ ಪರಿವಾರದವರೆಲ್ಲಾ ಆ ಮುದುಕಿಯನ್ನು ಕೋಪದಿಂದ ನೋಡಿದರು. "ಏನವ್ವಾ, ಯಾರೊಡನೆ ಮಾತಾಡುವಿಯೆಂದು ತಿಳಿದಿಲ್ಲವೇನು? ನಿನ್ನಂಥವಳ ಬದುಕೆಷ್ಟು? ಈ ಮನೆಯೆಷ್ಟು? ಈಗಲೇ ತೋರಿಸುತ್ತೇನೆ" ಎಂದು ಮಂತ್ರಿ ಪಕ್ಕದಲ್ಲಿದ್ದ ಭಟರನ್ನು ನೋಡಿ, "ಎಲ್ಲಾ ಎಳೆದು ಹೊರಗೆ ಹಾಕಿರಿ!" ಎಂದನು ಕೋಪ ದಿಂದ ಉರಿಯುತ್ತ.

ಆಗ ಮಹಾರಾಜನು ಮುಂದೆ ಬಂದು ಅವರೆಲ್ಲ ರನ್ನೂ ಶಾಂತಪಡಿಸಿದನು. ಮುದುಕವ್ವ ಹೇಳಿದ ಮಾತುಗಳನ್ನು ಅವನು ಶ್ರದ್ಧೆಯಿಂದ ಕೇಳಿದ್ದನು.



ಅದನ್ನು ಸರಿಯಾಗಿ ಅರ್ಥಮಾಡಿಕೊಂಡವನು ಅವ ನೊಬ್ಬನೇ. ಆ ಅವ್ವ ಹೇಳಿದ ಮಾತುಗಳು ಚಕ್ರಧರ ಮಹಾರಾಜನ ಮನಸ್ಸನ್ನು ತುಂಬಾ ಹೊರಳಾಡಿಸುತ್ತಿತ್ತು. ಅವನ ಹಿರಿಯವ್ವಳಾರೋ ಅವನ ತಲೆಗೆ ಕುಟ್ಟಿದಂತೆ ಅನಿಸಿತ್ತು.

ಈ ಅವ್ವಳಿಗೆ ತನ್ನ ಜನ್ಮಸ್ಥಳದ ಮೇಲಿರುವ ಅಭಿಮಾನಕ್ಕೆ, ತನ್ನ ಪೂರ್ವಿಕರ ಮೇಲಿರುವ ಭಕ್ತಿಗೆ ತನ್ನನ್ನು ಹೋಲಿಸಿಕೊಂಡನು ಮಹಾರಾಜ. ತಾನು ತಲೆಹಾಕಿದ ಕೆಲಸ ದೊಡ್ಡ ತಪ್ಪೆಂದು ಅವನಿಗೆ ತೋರಿತು.

"ಪ್ರಭುವಾಗಿಯೂ, ಪ್ರಾಜ್ಞನಾಗಿಯೂ ಇರುವ ನನಗೆ ಈ ಅವ್ವಳಿಗಿರುವ ಆಲೋಚನೆಯೇ ಬಾರದೆ ಹೋಯಿತೇಕೆ?" ಎಂದು ತನಗೆ ತಾನೇ ಕೇಳಿ ಕೊಂಡನು.

ಮಂತ್ರಿಯನ್ನೂ, ಪರಿವಾರದವರನ್ನೂ ಹತ್ತಿರ ಕರೆದು, "ಈ ಅವ್ವ ನನಗೊಂದು ದೊಡ್ಡ ಪಾಠ

ಕಲಿಸಿದ್ದಾಳೆ. ನಾನು ನನ್ನ ಮನೆಯನ್ನು ಪುನರುದ್ಧಾರ ಮಾಡಿ, ಪೂರ್ವಿಕರ ಗೌರವವನ್ನು ಕಾಪಾಡಿಕೊಳ್ಳಬೇಕಿತ್ತು. ನನ್ನ ವಿಧಿಯನ್ನು ನಾನು ಮರೆತೆನು. ಅದೃಷ್ಟವಶಾತ್ ಇಲ್ಲಿಗೆ ಬಂದುದರಿಂದ ಈ ಅವ್ವ ನನ್ನ ಕರ್ತವ್ಯವನ್ನು ಜ್ಞಾಪಕಪಡಿಸಿದಳು. ಇವಳು ನನಗೆ ಪರಮ ಪೂಜ್ಯಳಾಗಿದ್ದಾಳೆ.

"ನಾನಿನ್ನು ಇಲ್ಲಿಯೇ ಇದ್ದು ನನ್ನ ಹಳೆಯ ಭವನವನ್ನು ಪುನರುದ್ಧಾರ ಮಾಡಿಸಲು ಪ್ರಾರಂಭಿಸುತ್ತೇನೆ. ಅದು ಮುಗಿಯುವವರೆಗೆ ಈ ಪ್ರದೇಶದ ಮರಗಳ ಕೆಳಗೇ ಇದ್ದುಬಿಡುತ್ತೇನೆ. ನನ್ನ ಪೂರ್ವಿಕರು ಕಟ್ಟಿದ ಭವನವು ಪುನರುದ್ಧಾರವಾಗಿ ಬೆಳಗಿದ ಮೇಲೆ ಅಲ್ಲಿಗೆ ಹೋಗುತ್ತೇನೆ" ಎಂದು ತನ್ನ ನಿಶ್ಚಯವನ್ನು ಪ್ರಕಟಪಡಿಸಿದನು.

ರಾಜನು ಹೇಳಿದ ಮಾತುಗಳನ್ನು ಕೇಳಿ ಪರಿವಾರದಲ್ಲಿ ಕೆಲವರಷ್ಟೇ ಅರ್ಥಮಾಡಿಕೊಂಡರು. ಉಳಿದವರು ರಾಜನಿಗೆ ಏನೋ ಬುದ್ಧಿ ಕೆಟ್ಟಿರಬೇಕೆಂದುಕೊಂಡರು. ರಾಜನೇನೋ ಕೂಡಲೇ ಅಲ್ಲಿಯೇ ವಾಸಿಸಲು ಬಿಡಾರದ ಏರ್ಪಾಡು ಮಾಡಿಸಲು ತೊಡಗಿದನು. ನದೀ ತೀರದ ಸೊಗಸಾದ ಗಾಳಿಯಲ್ಲಿ ವಿಹರಿಸಲು ಪ್ರಾರಂಭಿಸಿದನು. ಅದೊಂದು ಪುಣ್ಯಕ್ಷೇತ್ರದಂತೆ ಅವನ ಚಿಂತೆಗಳೆಲ್ಲಾ ಹೋಗಿ ಮನಸ್ಸು ಬಹಳ ಹಗುರಾಯಿತು ಅವನಿಗೆ.

ರಾಜನು ಅಲ್ಲಿಯೇ ಇರುವನೆಂದು ತಿಳಿದು ನಗರದ ಪ್ರಮುಖರೂ, ಇತರ ಮುಖ್ಯಸ್ಥರೂ ಅಲ್ಲಿಗೆ ಬಂದು ವಾಸಮಾಡತೊಡಗಿದರು. ಅತ್ತ ರಾಜಭವನವು ದುರಸ್ತಿಯಾಗುತ್ತಿರಲು, ಇತ್ತ ಅವ್ವಳ ಪರಿಸರದಲ್ಲಿ ಇನ್ನೊಂದು ನಗರವು ಏಳತೊಡಗಿತು. ಅದೊಂದು ಹಳ್ಳಿಯ ಲಕ್ಷಣವಿರುವ ಪಟ್ಟಣದಂತಾಯಿತು. ಅಲ್ಲಲ್ಲಿ ಮರಗಿಡಗಳು, ಅವುಗಳ ಪಕ್ಕದಲ್ಲಿ ಮನೆಗಳು, ಅಂಗಡಿಗಳು.

ಇಷ್ಟೆಲ್ಲ ಆದರೂ ರಾಜನು ಅವಳ ಕುಟೀರವನ್ನು ಕದಲಿಸಲಿಲ್ಲ. ಯಾರಿಗೂ ಅದನ್ನು ಕದಲಿಸಲು ಬಿಡಲೂ ಇಲ್ಲ. ಆ ಅವ್ವಳಿಗೆ ತನ್ನ ಕೃತಜ್ಞತೆ ತಿಳಿಸಲು ಚಕ್ರಧರ ಮಹಾರಾಜನು ಅವ್ವಳ ಕುಟೀರವನ್ನು ಅವಳ ಇಷ್ಟದಂತೆ ದುರಸ್ತಿ ಮಾಡಿಸಿದನು. ಅದರ ಸುತ್ತು ಮುತ್ತಲೂ ಬೆಳಗುವ ಪಟ್ಟಣಕ್ಕೆ "ಅವ್ವಾಪುರ"ವೆಂಬ ಹೆಸರನ್ನೂ ಇಟ್ಟನು.

ಹೀಗೆ ಅನಂಗ ರಾಜ್ಯದ ಪೂರ್ವಿಕರ ರಾಜಭವನವು ಪುನರುದ್ಧಾರವಾಗಿ, ಅದು ಮುಂದಿನ ತಲಾಂತರಗಳನ್ನು ಕಾಪಾಡುವಷ್ಟು ದೃಢವಾಯಿತು.

ಚಕ್ರಧರ ರಾಜನು ಹಗಲೆಲ್ಲ ಪೂರ್ವಿಕರ ಅರಮನೆಯಲ್ಲಿದ್ದು ರಾಜಕಾರ್ಯಗಳನ್ನು ನಡೆಸುತ್ತ, ಉಳಿದ ಕಾಲವನ್ನು "ಅವ್ವಾಪುರ"ದಲ್ಲಿದ್ದು ಹಾಯಾಗಿ ಕಾಲ ಕಳೆಯುತ್ತಿದ್ದನು.





# ಯುಕ್ತಿವಂತ

ಸೀತಾಪುರವೆಂಬ ಊರಿಗೆ ಒಂದು ಸಾರಿ ಒಬ್ಬ ಯೋಗಿ ಬಂದು, ಊರವರಿಗೆ ಉಪಕಾರ ಮಾಡುವೆನೆಂದು ಹೇಳಿ ತಳ ಊರಿದನು. ಅವನು ದೇವೀ ಉಪಾಸಕನಾದ ದೊಡ್ಡ ಮಂತ್ರವಾದಿಯಂತೆ. ತನ್ನ ಮಂತ್ರ ವಿದ್ಯೆಗಳಿಂದ ಊರೊಳಗಿನ ಎಂತೆಂಥವರ ಎಂತೆಂತಹ ರಹಸ್ಯವನ್ನಾದರೂ ತಿಳಿದುಕೊಳ್ಳಬಲ್ಲೆನೆಂದು ಹೇಳಿಕೊಳ್ಳುತ್ತಿದ್ದನು. ಎಲ್ಲರನ್ನೂ ಅವನು ಬಹು ಬುದ್ಧಿವಂತಿಕೆಯಿಂದ ನಂಬಿಸಿ ಪ್ರತಿಫಲವಾಗಿ ಅಪಾರ ಹಣವನ್ನೂ ಸಂಪಾದಿಸಿದನು. ಆ ಊರಿನಲ್ಲಿರುವ ಕನಕಪ್ಪನೆಂಬ ರೈತನು ಮಾತ್ರ ಮಂತ್ರಗಾರ ಯೋಗಿಯನ್ನು ನಂಬುವವನಾಗಿರಲಿಲ್ಲ. ನಂಬುವವರಿರುವವರೆಗೆ ಹೊಟ್ಟೆ ತುಂಬಿಸಿಕೊಳ್ಳಲು ಅದೊಂದು ದಾರಿ ಎಂದುಕೊಳ್ಳುತ್ತಿದ್ದನು ಕನಕಪ್ಪ.

ಒಂದು ದಿನ ಊರೊಳಗಿನ ದೊಡ್ಡ ಸಾವುಕಾರನಾದ ಕಮಲನಾಥ ನಾಯಕನು ಕನಕಪ್ಪನ ಬಳಿಗೆ ಬಂದು, "ಆ ಮಂತ್ರಗಾರ ಯೋಗಿಗಳಿಂದಾಗಿ ನನಗೆ ಬಹು ದೊಡ್ಡ ಉಪಕಾರವಾಯಿತು. ಅದಕ್ಕೆ ಪ್ರತಿಫಲವಾಗಿ ನಾನು ಅವರಿಗೆ ನೂರು ವರಹಗಳನ್ನು ಬಹುಮಾನ ಕೊಡಬೇಕೆಂದಿದ್ದೇನೆ. ಅವನೊಬ್ಬ ಮೋಸದ ಯೋಗಿ ಎಂದು ನೀನು ಆಗಾಗ ಹೇಳುತ್ತಿರುವಿಯಷ್ಟೆ ? ಅದನ್ನು ಈಗ ನೀನು ರುಜುಗೊಳಿಸಿಬಿಟ್ಟರೆ ನಾನು ಅವರಿಗೆ ಬಹುಮಾನ ಕೊಡುವ ಆಲೋಚನೆ ಬಿಟ್ಟುಬಿಡುತ್ತೇನೆ" ಎಂದನು.

ಕನಕಪ್ಪನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಈ ಊರಿನವರೂ ಸುತ್ತುಮುತ್ತಲ ಗ್ರಾಮಗಳವರೂ ಅವನನ್ನು ನಂಬುತ್ತಾರೆ. ದೊಡ್ಡ ದೊಡ್ಡ ಮೊತ್ತಗಳನ್ನು ಅವನಿಗೆ ಕಾಣಿಕೆ ಕೊಡುತ್ತಾರೆ, ಹಾಗಿರುವಾಗ ಅವನು ಮೋಸಗಾರನೆಂದು ಹೇಗೆ ನಿರೂಪಿಸಲಿ ? ಅದೇ ಗೊತ್ತಾಗುವುದಿಲ್ಲ" ಎಂದನು.

ಕಮಲನಾಥ ನಾಯಕನು ಸ್ವಲ್ಪ ಯೋಚಿಸಿ, ಏನೋ ಉಪಾಯ ತಟ್ಟಿದವನಂತೆ, "ಒಂದು ಕೆಲಸ ಮಾಡು. ಹತ್ತು ದಿನಗಳ ಕೆಳಗೆ ನಿನ್ನದು ನೂರು ವರಹಗಳು ಕಳ್ಳತನವಾದುವೆಂದು ಹೇಳಿ, ನೀನು ನನ್ನಿಂದ ನೂರು ವರಹ ಕೈಗಡ ತೆಗೆದುಕೊಂಡಿದ್ದಿಯಷ್ಟೆ ? ಬೆಳೆ ಕೊಯಿಲಾದ ಮೇಲೆ ಕೊಡುವೆನೆಂದಿದ್ದೀ. ಈಗ ನೀನು ಆ ಯೋಗಿಯ ಹತ್ತಿರ ಹೋಗಿ ನಿನ್ನ ಹಣ ಏನಾಯಿತು, ಯಾರು ಕದ್ದರು ಎಂದು ಕೇಳು. ಅವನು ನಿಜ ಹೇಳಿದರೆ ಆ ಹಣ

ಜಿ. ಆರ್. ಲಕ್ಷ್ಮಿ

ನಿನಗೆ ಸಿಗುತ್ತದೆ. ಅದನ್ನು ನನಗೇ ಕೊಡು. ಅದನ್ನೇ ಯೋಗಿಗೆ ಬಹುಮಾನ ಕೊಡುತ್ತೇನೆ " ಎಂದನು.

" ಮಂತ್ರದ ಯೋಗಿಯಿಂದ ಹೇಳಲು ಸಾಧ್ಯವಾಗದಿದ್ದರೆ ? " ಎಂದು ಕೇಳಿದನು ಕನಕಪ್ಪ.

" ಆಗ ನೀನು ನನಗೆ ಕೊಡಬೇಕಾಗಿರುವ ನೂರು ವರಹಗಳನ್ನು ಬಿಟ್ಟುಬಿಡುತ್ತೇನೆ. ಮಂತ್ರದ ಯೋಗಿ ಮೋಸಗಾರನೆಂದು ಗೊತ್ತಾದ ಮೇಲೆ ನಾನು ಅವನಿಗೆ ಬಹುಮಾನ ಕೊಡುವ ಅಗತ್ಯವೇ ಇಲ್ಲದಂತಾಗುತ್ತದೆ. ನೀನು ನನಗೆ ಕೊಡತಕ್ಕ ನೂರರ ಸಾಲ ಬಂದಹಾಗೇ ಆಯಿತು " ಎಂದನು ಕಮಲನಾಥ ನಾಯಕ.

ಕಮಲನಾಥ ನಾಯಕನ ಬುದ್ಧಿಮತ್ತೆಗೆ ಕನಕಪ್ಪನು ಆಶ್ಚರ್ಯಪಟ್ಟನು. ಬಹಳ ಚಾಕಚಕ್ಯತೆಯಿಂದ ತನ್ನಿಂದ ಬರಬೇಕಾದ ಸಾಲವನ್ನು ವಸೂಲು ಮಾಡಿಕೊಳ್ಳುತ್ತಿದ್ದಾನೆ ಕಮಲನಾಥ ನಾಯಕ !

"ಸರಿ, ನಡೆಯಿರಿ ! " ಎಂದು ಹೊರಟನು ಕನಕಪ್ಪ. ಇಬ್ಬರೂ ಕೂಡಿಯೇ ಮಂತ್ರಗಾರ ಯೋಗಿಯ ಬಳಿಗೆ ಹೋದರು. ಆ ಸಮಯದಲ್ಲಿ ಯೋಗಿಯ ಹತ್ತಿರ ಅನೇಕರು ಸೇರಿಕೊಂಡಿದ್ದರು. ಮಾಂತ್ರಿಕ ಯೋಗಿ ಕಪ್ಪಗಿನ ಗೋಸಾವಿ ಅಂಗಿ ಧರಿಸಿ, ಜಿಂಕೆಯ ಚರ್ಮದ ಮೇಲೆ ಪದ್ಮಾಸನಸ್ಥನಾಗಿ ಕುಳಿತಿದ್ದನು. ಅವನ ಮುಂದೆ ಎದ್ದು ಕಾಣುವ ಬಣ್ಣಗಳಲ್ಲಿ ರಂಗವಲ್ಲಿ ಹಾಕಲಾಗಿತ್ತು. ಅದರ ಮಧ್ಯದಲ್ಲಿ ಎರಡು ಅಸ್ಥಿಕೆಗಳೂ, ಒಂದು ಕಪಾಲವೂ ಇದ್ದುವು. ಕಣ್ಣು ಮುಚ್ಚಿಕೊಂಡು ಅವನು ಏನೋ ಮಂತ್ರೋಚ್ಚಾರಣೆ ಮಾಡುತ್ತ, ನಡುನಡುವೆ ಬಲವಾಗಿ ಹಲ್ಲುಕಚ್ಚಿ ಹುಬ್ಬುಗಂಟು ಹಾಕಿಕೊಳ್ಳುತ್ತಿದ್ದನು.

ಕನಕಪ್ಪನು ಬಗ್ಗಿ ಅವನಿಗೆ ನಮಸ್ಕಾರ ಮಾಡಿ, ತನ್ನ ಹೆಸರು ಹೇಳಿ, "ಮಹಾಸ್ವಾಮಿ, ನನ್ನದೊಂದು ಸಣ್ಣ ಕೋರಿಕೆ. ಈ ಕೋರಿಕೆಯನ್ನು ನೀವು ನೆರವೇರಿಸಿದರೂ ನಿಮಗೆ ಪ್ರತಿಫಲ ಕೊಡುವ ಸ್ಥಿತಿಯವನು ನಾನಲ್ಲ. ಬಡ ರೈತ. ಅಶಕ್ತರಿಂದ ತಾವೇನೂ ಪ್ರತಿಫಲ ಕೇಳದೆ ಉಪಕಾರ ಮಾಡುವಿರೆಂದು ಕೇಳಿ ನಂಬಿ ಬಂದಿದ್ದೇನೆ " ಎಂದನು.



ಮಂತ್ರವಾದಿ ಕಣ್ಣು ತೆರೆದು, "ಹೌದಪ್ಪ. ನನ್ನ ಉಪಾಸಕಳಾದ ದೇವಿ ಭಕ್ತರು ತಾವಾಗಿ ಆನಂದ ದಿಂದ ಕೊಡುವುದನ್ನೇ ಸ್ವೀಕರಿಸುತ್ತಾಳೆ. ನಿನ್ನಂಥವ ರಿಗೆ ನಿಃಸ್ವಾರ್ಥದಿಂದ ಸೇವೆ ಮಾಡಬೇಕೆಂದು ದೇವಿಯ ಆಜ್ಞೆ. ಕೇಳಿಕೋ" ಎಂದನು.

"ಹತ್ತು ದಿನಗಳ ಕೆಳಗೆ ನನ್ನದು ನೂರು ವರಹ ಕಳವಾಗಿ ಹೋಯಿತು. ಅವುಗಳನ್ನು ಗಂಟುಕಟ್ಟಿ ಕೋಣೆಯೊಳಗಿನ ಮೂಲೆಯಲ್ಲಿ ಇಟ್ಟಿದ್ದೆ. ಊರವ ರೆಲ್ಲಾ ನಿಮ್ಮನ್ನು ನಂಬುತ್ತಿದ್ದರೂ ನನಗೆ ನಂಬಿಕೆ ಯಿಲ್ಲದೆ, ನಿಮ್ಮ ಸನ್ನಿಧಿಗೆ ಬರಲಿಲ್ಲ. ಈ ದಿನ ಸಾವುಕಾರ ಕಮಲನಾಥ ನಾಯಕರು ನನ್ನನ್ನು ಒತ್ತಾಯದಿಂದ ಕರೆದುಕೊಂಡು ಬಂದರು. ಆ ಹಣ ಯಾರು ಕದ್ದಿದ್ದಾರೆಂದು ಹೇಳಿ, ಅದು ನನಗೆ ಮತ್ತೆ ಸಿಗುವ ಹಾಗೆ ಮಾಡಬೇಕೆಂದು ಕೇಳಿಕೊಳ್ಳು ತ್ತೇನೆ" ಎಂದನು ಕನಕಪ್ಪ.

ಮಾಂತ್ರಿಕ ಯೋಗಿ ಕಣ್ಣು ಮುಚ್ಚಿಕೊಂಡು ಆಲೋಚನೆಗೆ ಬಿದ್ದನು. ಕನಕಪ್ಪನೆಂಬುವನೊಬ್ಬ ತನ್ನನ್ನು ನಂಬುವದಿಲ್ಲವೆಂದು ಅವನಿಗೆ ಈ ಮೊದಲೇ ಗೊತ್ತಾಗಿತ್ತು. ಅವನು ಕೂಡಾ ತನ್ನ ಬುಟ್ಟಿಗೆ ಬಿದ್ದನೆಂದರೆ ಊರವರೆಲ್ಲ ಬಿದ್ದಹಾಗೇ ಆಗುತ್ತದೆ. ಸುತ್ತುಮುತ್ತಿನ ಊರುಗಳಲ್ಲಿ ತನ್ನ ಪ್ರಭಾವ ಹೆಚ್ಚುತ್ತದೆ. ಆದುದರಿಂದ ಏನೋ ಒಂದು ವಿಧ ವಾಗಿ ಅವನಿಗೆ ಸಹಾಯ ಮಾಡಬೇಕು.

ಹೀಗೆ ಆಲೋಚನೆಗೆ ಮಾಡಿ ಮಾಂತ್ರಿಕನು ಸ್ವಲ್ಪ ಹೊತ್ತಿನ ಮೇಲೆ ಕಣ್ಣು ತೆರೆದು, "ಓ! ತಿಳಿಯಿತು! ದೇವಿಯ ದಯೆ!" ಎಂದನು ಗಂಭೀರ ಸ್ವರದಲ್ಲಿ.

"ಹಣವನ್ನು ಯಾರು ತೆಗೆದರು, ಸ್ವಾಮಿ?" ಎಂದನು ಕನಕಪ್ಪ ವಿನಯದಿಂದ.

"ನಿನಗೆ ತುಂಬಾ ಬೇಕಾದವನೇ ತೆಗೆದನು, ಅವನ ಹೆಸರನ್ನು ಹೇಳಲಾರೆ. ಏಕೆಂದರೆ, ಹಣವು ಪಾಪ ಗುಣ ಉಳ್ಳದ್ದು. ನೀನು ಅಜಾಗರೂಕತೆಯಿಂದ ಅದನ್ನು ಬೇರೆಯವರ ಕಣ್ಣಿಗೆ ಬೀಳುವ ಹಾಗೆ ಇಟ್ಟಿರುವಿ. ಅವನು ಅದನ್ನು ನೋಡಿ ಮನಸ್ಸು ಚಲಿಸಿ, ಎತ್ತಿಕೊಂಡು ಹೋದನು. ಮೊದಲನೇ





ತಪ್ಪನ್ನು ಕ್ಷಮಿಸಬೇಕೆಂದು ದೇವಿಯ ಆಜ್ಞೆ. ಈ ರಾತ್ರಿ ಅವನು ಆ ನೂರು ವರಹಗಳನ್ನೂ ತಂದು ನನಗೆ ಕೊಡುತ್ತಾನೆ. ಅರ್ಧ ರಾತ್ರಿ ಮೀರುವುದರೊಳಗೆ ತಂದುಕೊಡದೆ ಹೋದರೆ ಅವನ ಮೇಲೆ ಮಂತ್ರ ಪ್ರಯೋಗ ಮಾಡಿ, ನಾಲಗೆ ಬಿದ್ದುಹೋಗುವ ಹಾಗೆ ಮಾಡುತ್ತೇನೆ. ನೀನು ನಾಳೆ ಇದೇ ಸಮಯಕ್ಕೆ ಬಂದು ಹಣವನ್ನು ತೆಗೆದುಕೊಂಡು ಹೋಗು" ಎಂದನು ಮಾಂತ್ರಿಕ ಯೋಗಿ.

ಕನಕಪ್ಪನು ಬಹಳ ವಿನಯದಿಂದ ಮತ್ತೊಂದು ದೊಡ್ಡ ನಮಸ್ಕಾರ ಮಾಡಿ ಹೊರಟುಹೋದನು.

ತನ್ನ ಮಾತುಗಳಿಗೆ ಹೆದರಿ ಕಳ್ಳನು ರಾತ್ರಿಯಲ್ಲಿ ಹಣವನ್ನು ತಂದುಕೊಡುತ್ತಾನೆಂದು ಮಾಂತ್ರಿಕನು ಆಶಿಸಿದ್ದನು. ತನ್ನ ಕೈಯಾಳುಗಳ ಮೂಲಕ ಆ ಸಂಗತಿ ಜನರಿಗೆ ಗೊತ್ತಾಗುವ ಹಾಗೂ ಮಾಡಿದ್ದನು. ಆದರೆ ಹಾಗೇನೂ ನಡೆಯಲಿಲ್ಲ. ಅಂದರೆ ತನ್ನ ಮಂತ್ರಶಕ್ತಿಗೆ ಆ ಕಳ್ಳ ಭಯಪಡಲಿಲ್ಲವೆಂದೇ ಆಯಿತು. ಈ ಸಂಗತಿ ಬಯಲಾಗಿಬಿಟ್ಟರೆ ಜನರಿಗೆ ತನ್ನ ಮೇಲೆ ವಿಶ್ವಾಸ ಹೋಗಿಬಿಡುತ್ತದೆ. ಆದುದರಿಂದ ಆ ಮಾಂತ್ರಿಕನು ತನ್ನ ಹತ್ತಿರವಿದ್ದ ಹಣದಿಂದ ನೂರು ವರಹಗಳನ್ನು ಕನಕಪ್ಪನಿಗೆ ಕೊಡುವುದೇ ಒಳ್ಳೆಯದೆಂದು ನಿಶ್ಚಯಿಸಿದನು.

ಮರುದಿನ ಕನಕಪ್ಪನು ಮಾಂತ್ರಿಕ ಯೋಗಿಯ ಬಳಿಗೆ ಬಂದ ಕೂಡಲೇ ಮಾಂತ್ರಿಕನು, "ಎಲೋ ಕನಕಪ್ಪಾ! ದೇವಿಯ ಕೃಪೆ ಅಪಾರ, ಇನ್ನು ಮೇಲೆ ಹಣದ ವಿಷಯದಲ್ಲಿ ಜಾಗರೂಕನಾಗಿರು. ಅಜಾಗ್ರತೆಯಿಂದಿರುವವರಿಗೆ ದೇವಿ ಸಹಾಯ ಮಾಡಲಾರಳು. ನಿನ್ನ ಹಣ ಕದ್ದವನು ರಾತ್ರಿಯಲ್ಲಿ ಬಂದು ಹಣ ಕೊಟ್ಟು ನನ್ನ ಕಾಲಿಗೆ ಬಿದ್ದು ದಮ್ಮಯ್ಯ ದಕ್ಕಯ್ಯ ಹೇಳಿ ಹೋದ. ಇಕೋ, ತೆಗೆದುಕೊಂಡು ಹೋಗು" ಎಂದು ಕನಕಪ್ಪನಿಗೆ ಚಿಕ್ಕದೊಂದು ಹಣದ ಗಂಟು ಕೊಟ್ಟನು.

ಕನಕಪ್ಪನ ಹಣವನ್ನು ಲೆಕ್ಕಮಾಡಿ ನೋಡಿದನು. ಸರಿಯಾಗಿ ನೂರು ವರಹಗಳಿದ್ದುವು.

"ಮಹಾ ಪ್ರಸಾದ ಮಹಾಸ್ವಾಮಿ" ಎಂದು ನಮಸ್ಕರಿಸಿ ಕನಕಪ್ಪನು ಹೊರಟುಹೋದನು.

ಇದರಿಂದ ಮಾಂತ್ರಿಕನಲ್ಲಿ ಮಹಿಮೆಯಿದೆ ಎಂದುಕೊಂಡು, ಕಮಲನಾಥ ನಾಯಕನು ಮಾಂತ್ರಿಕನಿಗೆ ಕೊಡಬೇಕೆಂದುಕೊಂಡ ನೂರು ವರಹಗಳನ್ನು ಬಹುಮಾನವಾಗಿ ಕೊಟ್ಟು, ತನ್ನ ಸಾಲವನ್ನು ವಸೂಲು ಮಾಡಿಕೊಳ್ಳಲು, ಕನಕಪ್ಪನ ಮನೆಗೆ ಹೋದನು.

ಅಲ್ಲಿಗೆ ಹೋಗಿ ಕೇಳಿದಾಗ ಕನಕಪ್ಪನು, "ನಾನು ಇನ್ನು ನಿಮಗೆ ಸಾಲ ಕೊಡಬೇಕೆಂದರೆ ಏನು ಅರ್ಥ? ಮಾಂತ್ರಿಕನಿಗೆ ಯಾವ ಶಕ್ತಿಯೂ ಇಲ್ಲವೆಂದು ರುಜುವಾಯಿತು. ಅದರೊಂದಿಗೆ ನಿಮಗೆ ನಾನು ಕೊಡಬೇಕಾದ ಸಾಲವೂ ತೀರಿತು" ಎಂದನು ಕನಕಪ್ಪ.

"ನೀನು ಆ ಯೋಗಿಗೆ ಮಂತ್ರಶಕ್ತಿ ಇಲ್ಲವೆಂದು ಎಲ್ಲಿ ನಿರೂಪಿಸಿದ್ದಿ? ಕಳವಾದ ನಿನ್ನ ಹಣವನ್ನು

ಅವನು ತರಿಸಿಕೊಟ್ಟನಷ್ಟೆ ?" ಎಂದನು ಕಮಲನಾಥ ನಾಯಕ ಕೋಪದಿಂದ.

"ನಿಜಕ್ಕೂ ನನ್ನ ಹಣ ಕಳವಾಗಿರುತ್ತಿದ್ದರೆ ಅವನ ಮಂತ್ರಶಕ್ತಿಯನ್ನು ನಂಬುತ್ತಿದ್ದೆ" ಎಂದು ಕನಕಪ್ಪನು ನಕ್ಕನು.

"ನೀನು ಏನು ಹೇಳುವಿ ? ಅರ್ಥವಾಗಲಿಲ್ಲ" ಎಂದನು ಕಮಲನಾಥ ನಾಯಕ.

"ಸಮಯಕ್ಕೆ ನಿಮ್ಮ ಹತ್ತಿರ ಸಾಲ ಕೇಳಲು ಬಲವಾದ ಕಾರಣ ಬೇಕೆಂದುಕೊಂಡು ಹಣ ಕಳವಾಯಿತೆಂದು ನಿಮ್ಮ ಹತ್ತಿರ ಸುಳ್ಳು ಹೇಳಿದೆ. ಆ ಸಣ್ಣ ನಿಜವನ್ನು ಕೂಡಾ ತಿಳಿದುಕೊಳ್ಳಲಾಗದ ಮಾಂತ್ರಿಕನು ನನಗೆ ಅವನ ಹಣದಿಂದ ನೂರು ವರಹ ತೆಗೆದುಕೊಟ್ಟು ಅವನ ಮರ್ಯಾದೆ ಉಳಿಸಿಕೊಂಡಿದ್ದಾನೆ, ಅಷ್ಟೇ" ಎಂದನು ಕನಕಪ್ಪ.

"ಹಾಗಾದರೆ ಈ ವಿಷಯವನ್ನು ಹತ್ತು ಮಂದಿಯೊಂದಿಗೆ ಹೇಳಿಬಿಟ್ಟರೆ ಒಳ್ಳೆಯದಿತ್ತು. ಹಾಗೇಕೆ ಮಾಡಲಿಲ್ಲ ?" ಎಂದು ಕಮಲನಾಥ ನಾಯಕನು ಪ್ರಶ್ನಿಸಿದನು.

"ಯಾಕೆಂದರೇನು ? ಊರವರೆಲ್ಲಾ ಮೂರ್ಖತನದಿಂದ ವೇಷಧಾರಿಯಾದ ಆ ಮಾಂತ್ರಿಕ ಯೋಗಿಯನ್ನು ಕುರುಡುತನದಿಂದ ನಂಬಿಕೊಂಡಿದ್ದಾರೆ. ನಿಜ ಸಂಗತಿ ಹೇಳಿದರೆ ಬೇಕೆಂತಲೇ ನಾನು ಸುಳ್ಳು ಹೇಳುವೆನೆಂದು ನನ್ನನ್ನೇ ಎಲ್ಲರೂ ಒದೆಯಲು ಬರುತ್ತಾರೆ. ಆದರೂ ತಿಳುವಳಿಕೆಯುಳ್ಳವರು ಇಂತಹ ಮಂತ್ರಗಾರರನ್ನು ನಂಬಲಾರರು. ಅದಿಲ್ಲದವರೊಂದಿಗೆ ನಿಜ ಹೇಳಿ ಪ್ರಯೋಜನವಿಲ್ಲ" ಎಂದನು ಕನಕಪ್ಪ.

"ಹತ್ತು ಜನರ ಮುಂದೆ ನೀನು ನಿಜವನ್ನು ಹೇಳಲೇಬೇಕಿತ್ತು. ಜನರು ನಿನ್ನ ಮೇಲೆ ಬೀಳದಂತೆ ನಾನು ನಿನ್ನನ್ನು ಕಾಪಾಡುತ್ತಿದ್ದೆ" ಎಂದನು ಕಮಲನಾಥ ನಾಯಕ.

"ಓಹೋ ! ಇದು ಇನ್ನೂ ಚೆನ್ನಾಗಿದೆ, ಆ ಮಂತ್ರಗಾರನ ಹೆಸರು ಹಾಳಾಗುವುದಕ್ಕಿಂತಲೂ ನನಗೆ ನನ್ನ ಮರ್ಯಾದೆ ಉಳಿಸಿಕೊಳ್ಳುವುದೇ ಮುಖ್ಯ. ಸಾವುಕಾರರ ಸಾಲವನ್ನು ತೀರಿಸಲಾಗದೆ ಹಣ ಕಳವಾಯಿತೆಂದು ಸುಳ್ಳು ಹೇಳುವ ಗುಣ ಕನಕಪ್ಪನಿಗೆ ಇದೆ ಎಂದು ಎಲ್ಲರಿಗೂ ಗೊತ್ತಾಗಿಬಿಟ್ಟರೆ ಹತ್ತು ಮಂದಿಯ ಮುಂದೆ ನನ್ನ ಮರ್ಯಾದೆ ಏನಾಗಬೇಕು ? ನೀವು ಹೇಳಿದ ಮಾತು ತಪ್ಪುವವರಲ್ಲವೆಂದುಕೊಂಡು, ನಿಮ್ಮ ಸಾಲ ಮುಟ್ಟಿತಲ್ಲವೇ ಅಂದೆನು. ಮಾತು ತಪ್ಪುವಿರಾದರೆ ಹೇಳಿರಿ, ಕೊಟ್ಟುಬಿಡುತ್ತೇನೆ" ಎಂದನು ಕನಕಪ್ಪ.

"ಬೇಡ ಬೇಡ. ಅದು ನಿನ್ನ ಬುದ್ಧಿವಂತಿಕೆಗೆ ಬಹುಮಾನವಾಗಲಿ !" ಎಂದು ಕಮಲನಾಥ ನಾಯಕನು ಶುಷ್ಕನಗೆ ನಗುತ್ತ ಹೊರಟುಹೋದನು.





# ರಂಗಣ್ಣನ ವೀಲು

ಗೌರುಗುತ್ತಿ ಎಂಬ ಊರಿನಲ್ಲಿ ರಂಗಣ್ಣನೆಂಬ ಒಬ್ಬ ಧನವಂತನಿದ್ದನು. ಚೆನ್ನಾಗಿ ಬದುಕಿ ಬಾಳಿ ಬಂದ ಅವನಿಗೆ ವೃದ್ಧಾಪ್ಯ ಬಂದ ಮೇಲೆ ಕ್ರಮೇಣ ದೃಷ್ಟಿ ಮಂದವಾಗುತ್ತ ಕುರುಡು ಬಂದಿತು. ಅದು ಮಾತ್ರವಲ್ಲದೆ ಸಿಡಿಲು ಬಡಿದರೂ ಕೇಳದಷ್ಟು ಬ್ರಹ್ಮ ಕಿವುಡು ಕೂಡಾ ಉಂಟಾಯಿತು. ದೇಹದ ಶಕ್ತಿಯೂ ಕುಂಠಿಸಿ ಮೂಲೆ ಸೇರಿದನು.

ಒಂದು ದಿನ ರಂಗಣ್ಣನು ತನ್ನ ಹಿರಿಯ ಮಗ ಶಂಕರನನ್ನು ಕರೆದು, "ಅಪ್ಪಾ, ಬದುಕಿರುವಷ್ಟು ಕಾಲದವರೆಗೆ ಯಾವ ಅವಯವಗಳಿಗೂ ಲೋಪವಿಲ್ಲದಂತೆ ಇರಬೇಕೆಂದೇ ಕಾಣುತ್ತದೆ. ಕುರುಡನಾಗಿಯೇ ಸಾಯಬೇಕಾಗುವುದೇನೋ ಎಂದು ಭಯವಾಗುತ್ತದೆ. ನನಗೆ ದೃಷ್ಟಿ ಬರುವ ಹಾಗೆ ಏನಾದರೂ ವೈದ್ಯಚಿಕಿತ್ಸೆ ಮಾಡಿಸಬಾರದೇನೋ ?" ಎಂದನು.

ಶಂಕರನು ತಂದೆಯ ಕೋರಿಕೆಯನ್ನು ಹಗುರಾಗಿ ಹಾರಿಸುವಂತೆ, "ಅಪ್ಪಾ, ಕಣ್ಣು ಕಾಣದುದರಿಂದ ನಿಮಗೇನು ನಷ್ಟವಾಗಿದೆ ? ನಿಮ್ಮ ಕಣ್ಣುಗಳಾಗಿ ನಾವಿಲ್ಲವೇ ? ನಿಮ್ಮ ಸೊಸೆಯಂದಿರೂ ಮೊಮ್ಮಕ್ಕಳೂ ಇಲ್ಲವೇ ?" ಎಂದನು.

ಆದರೆ ರಂಗಣ್ಣನು ಮೊಮ್ಮಕ್ಕಳ ಮುಖ ನೋಡದಿರಲು ಸಾಧ್ಯವಿಲ್ಲವೆಂದು ಹಟ ಹಿಡಿದನು. ಶಂಕರನು ಊರಲ್ಲಿದ್ದ ಒಬ್ಬ ವೈದ್ಯನನ್ನು ಕರೆಯಿಸಿ ತಂದೆಗೆ ದೃಷ್ಟಿ ಬರುವ ಹಾಗೆ ಏನೇನು ಮಾಡಿಸಬೇಕೋ ಅದನ್ನೆಲ್ಲಾ ಮಾಡಿಸಿದನು. ರಂಗಣ್ಣನ ಅದೃಷ್ಟವೂ, ವೈದ್ಯನ ಸಾಮರ್ಥ್ಯವೂ ಕೂಡಿ, ಕೆಲವು ದಿನಗಳಲ್ಲಿ ರಂಗಣ್ಣನಿಗೆ ಕಣ್ಣುಗಳು ಚೆನ್ನಾದುವು. ದೃಷ್ಟಿ ಸ್ಪಷ್ಟವಾಯಿತು.

ತನಗೆ ಒಳ್ಳೆಯ ವೈದ್ಯ ಮಾಡಿಸಿದುದಕ್ಕೆ ರಂಗಣ್ಣನು ಶಂಕರನನ್ನು ತುಂಬಾ ಮೆಚ್ಚಿಕೊಂಡನು.

ಇದನ್ನು ನೋಡಿ ರಂಗಣ್ಣನ ಎರಡನೇ ಸೊಸೆ ತನ್ನ ಗಂಡನೊಂದಿಗೆ, "ನೋಡಿದಿರಾ, ನಿಮ್ಮ ಅಣ್ಣ ವೈದ್ಯರನ್ನು ಕರೆದುತಂದು ಕಣ್ಣು ಸರಿಮಾಡಿಸಿದರೆಂದು ಮಾವಯ್ಯ ಅವರನ್ನು ತುಂಬಾ ಹೊಗಳುತ್ತಾರೆ. ನೀವು ಕೂಡಾ ಮಾವಯ್ಯನ ಮೆಚ್ಚುಗೆ ಪಡೆಯುವುದು ಒಳ್ಳೇದಲ್ವೇ ? ಅವರ ಪ್ರೀತಿಯಲ್ಲಿ ಹೆಚ್ಚು ಕಡಿಮೆ ಬಾರದಂತೆ ನೀವೂ ಪ್ರಯತ್ನ ಮಾಡಬೇಡ್ವೇನ್ರಿ ?" ಎಂದಳು. ಆಗ ಥಕ್ಕನೆ ಎಚ್ಚರಬಂದವನಂತೆ ಚಿಕ್ಕ ಮಗ ಚಿದಂಬರನು, "ಹೌದೌದು. ಇದು

ಕಮಲಿನಿ

ನನಗೆ ತೋರಲೇ ಇಲ್ಲ. ಒಳ್ಳೇ ಸಮಯಕ್ಕೆ ನೆನಪು ಮಾಡಿದಿ " ಎಂದು ಮರುದಿನವೇ ಪಟ್ಟಣಕ್ಕೆ ಹೋಗಿ ಹೆಸರುವಾಸಿಯಾದ ಒಬ್ಬ ವೈದ್ಯನನ್ನು ಕರೆದುಕೊಂಡು ಬಂದನು.

ಈ ವೈದ್ಯನು ರಂಗಣ್ಣನ ಮನೆಯಲ್ಲೇ ಇರುತ್ತ, ರಂಗಣ್ಣನ ಕಿವುಡು ಹೋಗುವ ಹಾಗೆ ಒಳ್ಳೆಯ ಚಿಕಿತ್ಸೆ ಮಾಡಿದನು. ಚಿಕ್ಕಮಗನು ತನ್ನ ಮೇಲೆ ತೋರಿಸಿದ ಶ್ರದ್ಧೆಗೆ ರಂಗಣ್ಣನಿಗೆ ಬಹಳ ಸಂತೋಷ ವಾಯಿತು. ಈಗ ಅವನ ಎರಡು ಲೋಪಗಳೂ ಮಾಯವಾಗಿದ್ದುವು.

ಮತ್ತೊಂದು ತಿಂಗಳು ಕಳೆದ ಮೇಲೆ ರಂಗಣ್ಣನು ತನ್ನ ಅನಂತರ ತನ್ನ ಯಾವತ್ತೂ ಆಸ್ತಿ ಪೂರಾ ಯಾರಿಗೆ ಸೇರಬೇಕೆಂಬುದನ್ನು ಕುರಿತು ವಿವರವಾಗಿ ಒಂದು ವೀಲು ಬರೆಯಿಸಿ, ಅದನ್ನು ಇಬ್ಬರು ಮಗಂದಿರಿಗೂ ತೋರಿಸಿದನು.

ಆ ವೀಲುನಾಮೆಯನ್ನು ಓದಿ ನೋಡಿದ ಅಣ್ಣ ತಮ್ಮಂದಿರಿಗೆ ಕಣ್ಣು ಕತ್ತಲೆ ಬಂದಿತು. ರಂಗಣ್ಣನು ತನಗಿರುವ ಆಸ್ತಿ ಪೂರಾ ಊರೊಳಗಿನ ಧರ್ಮ ಛತ್ರಕ್ಕೆ ಸೇರಬೇಕೆಂದು ಬರೆದಿದ್ದನು.

ತಂದೆಯೊಂದಿಗೆ ವಾದಮಾಡಿ ಪ್ರಯೋಜನವಿಲ್ಲ ವೆಂದುಕೊಂಡು ಅಣ್ಣತಮ್ಮಂದಿರು, ಊರೊಳಗಿನ ದೊಡ್ಡ ಮನುಷ್ಯರಿಗೆ ಆ ಸಮಾಚಾರವನ್ನೆಲ್ಲ ಹೇಳಿ, " ಅದೇಕೋ ನಮ್ಮ ತಂದೆ ಆಸ್ತಿ ಪೂರಾ ನಮಗೆ ಸಿಗದ ಹಾಗೆ ಮಾಡುತ್ತಿದ್ದಾರೆ. ಇದು ದೊಡ್ಡ ಅನ್ಯಾಯ. ನೀವು ಬಂದು ಅವರೊಂದಿಗೆ ಮಾತಾಡಿ ನಮಗೆ ಅನ್ಯಾಯವಾಗದ ಹಾಗೆ ಮಾಡಬೇಕು " ಎಂದು ಕೇಳಿಕೊಂಡರು.

ದೊಡ್ಡ ಮನುಷ್ಯರು ರಂಗಣ್ಣನ ಬಳಿಗೆ ಬಂದರು. ಅವರೊಳಗೆ ಒಬ್ಬನು ರಂಗಣ್ಣನನ್ನು ನೋಡಿ, " ಇದೇಕೆ ಹೀಗೆ ಮಾಡಿದಿರಿ ರಂಗಣ್ಣನವರೇ ? ಇದೇನೂ ಚೆನ್ನಾಗಿಲ್ಲ. ಪಂಚೇಂದ್ರಿಯಗಳ ಪಟ್ಟು ತಪ್ಪದಂತೆ ಮನುಷ್ಯನ ಕಾಲ ಕಳೆಯುವ ಹಾಗಾಗುವು ದೊಂದು ಒಳ್ಳೆಯ ಅದೃಷ್ಟ. ನಿಮ್ಮ ಮಗಂದಿ ರಿಬ್ಬರೂ ನಿಮ್ಮ ಕಣ್ಣಿನ ದೃಷ್ಟಿ ಸರಿಮಾಡಿಸಿದ್ದಾರೆ.



ಕೇಳಲಾಗದುದನ್ನು ಕೇಳುವಂತೆ ಮಾಡಿದ್ದಾರೆ. ಅಂಥವರಿಗೆ ನೀವು ಆಸ್ತಿಯಲ್ಲಿ ಬಿಡಿಗಾಸೂ ಕೊಡದೆ ಎಲ್ಲವನ್ನೂ ದಾನ ಮಾಡುವುದು ದೊಡ್ಡ ಅನ್ಯಾಯ ! ಇದನ್ನು ಯಾರೂ ಮೆಚ್ಚಲಾರರು " ಎಂದನು, ಉಳಿದವರೂ ಹೌದೆಂದರು.

ರಂಗಣ್ಣನು ಸಣ್ಣಗೆ ನಕ್ಕು, "ಹೌದು, ಕಣ್ಣು ಸರಿಮಾಡಿಸಿ ದೊಡ್ಡ ಮಗನೂ ಕಿವುಡನ್ನು ಹೋಗಲಾಡಿಸಿ ಚಿಕ್ಕ ಮಗನೂ ನಿಜಕ್ಕೂ ನನಗೆ ಬಹಳ ಒಳ್ಳೆಯದು ಮಾಡಿದ್ದಾರೆ. ಆದರಿಂದ ನಾನೀಗ ಮನೆಯಲ್ಲಿ ನಡೆಯುವ ಗೊಡವೆಗಳನ್ನೆಲ್ಲ ನೋಡಲಿಕ್ಕೂ ಕೇಳಲಿಕ್ಕೂ ಸಾಧ್ಯವಾಗಿದೆ. ಆಸ್ತಿಯನ್ನು ಧರ್ಮಕಾರ್ಯಗಳಿಗೆ ವಿನಿಯೋಗಿಸುವುದರಿಂದ ಆಗುವ ಪ್ರಯೋಜನವು, ನನ್ನ ಮಗಂದಿರಿಗೆ ಕೊಡುವುದರಿಂದ ಆಗುವುದಿಲ್ಲವೆಂದು ನನಗೆ ಅರ್ಥವಾಯಿತು " ಎಂದನು.

ಈ ಮಾತು ಕೇಳಿ ರಂಗಣ್ಣನಿಗೆ ಮಗಂದಿರ ಮೇಲೆ ಏನೋ ಅತೃಪ್ತಿ ಇರುವುದೆಂದು ಆ ದೊಡ್ಡ ಮನುಷ್ಯರಿಗೆ ಅರ್ಥವಾಯಿತು. ಅವರು ಶಂಕರನನ್ನೂ ಚಿದಂಬರನನ್ನೂ ನೋಡಿ "ಕೇಳಿದಿರಷ್ಟೆ ? ಏನು ಹೇಳುವಿರಿ ?" ಎಂದು ಕೇಳಿದರು.

ಶಂಕರನೂ, ಚಿದಂಬರನೂ ನಾಚಿಕೆಯಿಂದ ಮುಖ ಬಾಡಿಸಿಕೊಂಡು ತಲೆ ತಗ್ಗಿಸಿದರು.

ರಂಗಣ್ಣನು ಮಗಂದಿರನ್ನು ನೋಡಿ, "ಚಿಂತೆ ಪಡಬೇಡಿರಪ್ಪ. ತಂದೆತಾಯಂದಿರು ಉಳಿಸಿಕೊಡುವ ಆಸ್ತಿಪಾಸ್ತಿಗಾಗಿ, ಮಕ್ಕಳು ಅವರನ್ನು ಮುದುಕರಾದಾಗ ಆದರಿಸುವರೆಂಬ ವಿಷಯ ಸರ್ವಸಾಧಾರಣವಾಗಿ ನಡೆಯುವಂಥಾದ್ದೇ. ಅದು ನಿಜವಾದ ಪ್ರೇಮವೆನಿಸಲಾರದು. ಈ ಸಂಗತಿ ನಿಮಗೆ ಅರ್ಥವಾಗುವ ಹಾಗೆ ಮಾಡಲು ಈ ವೀಲುನಾಮೆಯ ವ್ಯವಹಾರವನ್ನು ಸೃಷ್ಟಿಸಿದೆನು " ಎಂದನು.

ಎಲ್ಲರೂ ರಂಗಣ್ಣನನ್ನು ಆಶ್ಚರ್ಯದಿಂದ ನೋಡಿದರು.

ಅವನು ಮಗಂದಿರನ್ನು ಆಪ್ಯಾಯತೆಯಿಂದ ನೋಡುತ್ತ, "ನಾನು ಕೇಳಿಕೊಳ್ಳದೆಯೇ ನೀವಾಗಿ ನನ್ನ ಕಣ್ಣುಗಳನ್ನೂ ಕಿವುಡುತನವನ್ನೂ ಹೋಗಲಾಡಿಸಿದ್ದರೆ ನಾನು ಸಂತೋಷಪಡುತ್ತಿದ್ದೆ. ಹಾಗೆ ನೀವು ಮಾಡಲಿಲ್ಲ. ಈ ವೀಲುನಾಮೆ ನಿಮಗೊಂದು ಪಾಠ ಕಲಿಸಿರಬೇಕು. ನಿಜಕ್ಕೂ ನಾನು ಸಂಪಾದಿಸಿದ ಆಸ್ತಿ ನನ್ನ ಮಕ್ಕಳೂ ಮರಿಮಕ್ಕಳೂ ಅನುಭವಿಸುವುದಕ್ಕಿಂತಲೂ ಹೆಚ್ಚಿನ ತೃಪ್ತಿ ನನಗೇನಿದ್ದೀತು ! ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬೇಡಿ !" ಎಂದನು.

ರಂಗಣ್ಣನ ಮಾತು ಕೇಳಿ ಬಂದ ದೊಡ್ಡ ಮನುಷ್ಯರೂ, ಅವನ ಮಗಂದಿರೂ ತೃಪ್ತಿಯಿಂದ ತಲೆಯಾಡಿಸಿದರು.






ಮಹಾ ಪೌರಾಣಿಕನಾದ ಸೂತನು ಶೌನಕಾದಿ ಮುನಿಗಳಿಗೆ ದಶಾವತಾರಗಳಲ್ಲಿ ಒಂಬತ್ತನೆಯದಾದ ಬುದ್ಧಾವತಾರದ ಕಥಾನಕವನ್ನು ವಿವರಿಸಿ ಹೇಳಲು ಉಪಕ್ರಮಿಸಿದನು.

ಕಲಿಯುಗವು ಪ್ರವೇಶಿಸಿ ದಿನಗಳು ಸಾಗುತ್ತಾ ಇದ್ದುವು. ಸೃಷ್ಟಿಯಲ್ಲಿ ಮಾನವತೆಯ ಗುಣಮಟ್ಟಗಳು ಕೆಳಗಿಳಿಯುತ್ತ, ಕ್ರೂರಮೃಗತ್ವವನ್ನು ಅವಲಂಬಿಸತೊಡಗಿತು. ಮಾನವರಿಗೆ ಬುದ್ಧಿಶಕ್ತಿ ಕಲ್ಪನಾಶಕ್ತಿಗಳಿರುವುದರಿಂದ ಮೃಗಜಾತಿಗಳಿಗಿಂತಲೂ ಕ್ರೂರರಾಗುತ್ತಿದ್ದರು.

ಮಾನವನು ಬುದ್ಧಿಯನ್ನು ತೂಕ ತಪ್ಪದಂತೆ ಕ್ರಮದಲ್ಲಿರಿಸಿಕೊಂಡು, ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕಾದ ಕಾಲವು ಬಂದುಬಿಟ್ಟಿತು.

ಅದಕ್ಕೆ ಮೊದಲಿನ ಯುಗಗಳಲ್ಲಿ ಯಾವನೋ ದುಷ್ಟ ದಾನವನನ್ನು ಸಂಹಾರ ಮಾಡಲಿಕ್ಕಾಗಿ ವಿಷ್ಣು ಅವತಾರವೆತ್ತಿ ಆ ಕೆಲಸ ಮುಗಿಸುವಂತಹ ಕಾಲವು ದಾಟಿಹೋಯಿತು.

ಕಲಿಯುಗದಲ್ಲಿ ಅಂತಹ ಅಸಲು ದಾನವರಾರೂ ಇರಲಿಲ್ಲ. ಮಾನವರೆಲ್ಲರೂ ರಾಕ್ಷಸರಾಗಿಬಿಟ್ಟರು. ಒಬ್ಬರನ್ನೊಬ್ಬರು ದೋಚಿಕೊಳ್ಳುತ್ತಿದ್ದರು ; ಹಿಂಸಿಸುತ್ತಿದ್ದರು. ಯಜ್ಞಯಾಗಗಳೆಂಬ ಹೆಸರುಗಳನ್ನು ಹೇಳಿಕೊಂಡು, ದಯೆಗೆ ಸ್ಥಾನವೀಯದೆ, ಜೀವಹಿಂಸೆಯನ್ನೇ ಪರಮಾವಧಿಯಾಗಿರಿಸಿ, .ಮದ್ಯಮಾಂಸಗಳನ್ನು ಸೇವಿಸುತ್ತ, ಭೋಗಪಾರಾಯಣರಾದರು. ಮಾನವನು ಬುದ್ಧಿಜೀವಿ ಎಂಬ ಸತ್ಯವನ್ನು ತಿಳಿದುಕೊಳ್ಳಲಾಗದಂತಹ ಪಾಮರತೆ ಎಲ್ಲಾ ಕಡೆಯೂ ವ್ಯಾಪಿಸಿಕೊಂಡಿತು. ಅದರ ಫಲಿತವಾಗಿ ಮಾನವರಿಗೇ ಬಾಧೆಗಳೂ, ಯಾತನೆಗಳೂ, ದೀನತನಗಳೂ ಮೇಲಿಂದ ಮೇಲೆ ಹೆಚ್ಚಾಗುತ್ತಿದ್ದುವು.

ಮನುಷ್ಯನಾಗಿ ಹುಟ್ಟಿ, ಪರಿಪೂರ್ಣ ಮಾನವನಾಗಿ, ಯಾವ ದೈವಿಕ ಸ್ಪರ್ಶವೂ ಇಲ್ಲದ ಬುದ್ಧಮೂರ್ತಿಯಾಗಿ ಸಹ ಮಾನವ ಕೋಟಿಯನ್ನು ಉದ್ಧರಿಸಬಲ್ಲ, ಕಾಲಾನುಗುಣವಾದ ಧರ್ಮವನ್ನು ಸಂಸ್ಥಾಪಿಸಬೇಕಾದ ಅಗತ್ಯವು ವಿಷ್ಣುವಿಗೆ ಬಂದಿತು.

೨೧. ಬುದ್ಧಾವತಾರ



ನೇಪಾಳ ದೇಶದೊಳಗಿನ ಕಪಿಲವಸ್ತು ನಗರವನ್ನು, ಶಾಕ್ಯವಂಶಕ್ಕೆ ಸೇರಿದ ಶುದ್ಧೋದನ ಮಹಾರಾಜನು ಪಾಲಿಸಿಕೊಂಡಿದ್ದನು. ಅವನ ರಾಣಿಯಾದ ಮಾಯಾ ದೇವಿ, ಪೂರ್ಣಿಮೆಯ ಚಂದ್ರಬಿಂಬದಂತಹ ಪ್ರಕಾಶ ಮಾನವಾದ ಬೆಳ್ಳಗಿನ ಆನೆಯೊಂದು ಆಕಾಶದಿಂದಿಳಿ ಯುವುದನ್ನು ಕನಸಿನಲ್ಲಿ ನೋಡಿದಳು. ಅದು ತನ್ನ ಶರೀರದೊಳಗೆ ಪ್ರವೇಶಿಸಿದಂತೆ ಅವಳಿಗೆ ತೋರಿತು. ಅಂದಿನಿಂದ ಅವಳು ಗರ್ಭಿಣಿಯಾದ ಲಕ್ಷಣ ಪ್ರಾರಂಭ ವಾಯಿತು.

ಒಬ್ಬ ಮಹಾ ಪುರುಷನು ಮಹಾರಾಣಿಯಿಂದ ಉದಯವಾಗಲಿರುವನೆಂದು ಜ್ಯೋತಿಷ ಪಂಡಿತರು, ಆ ಕನಸಿನ ಫಲಿತವನ್ನು ಪರೀಕ್ಷಿಸಿ ಮಹಾರಾಜ ನೊಂದಿಗೆ ಹೇಳಿದರು.

ತಿಂಗಳು ತುಂಬುತ್ತಿರಲು ಮಾಯಾದೇವಿ ಪಲ್ಲಕ್ಕಿ ಯಲ್ಲಿ ಕುಳಿತು ತೌರುಮನೆಗೆ ಹೊರಟಳು. ದಾರಿ ಯಲ್ಲಿ ಹತ್ತಿರದ ಒಂದು ವನದಲ್ಲಿ ಅವಳು ಒಂದು ಗಂಡು ಮಗುವನ್ನು ಪ್ರಸವಿಸಿದಳು. ಅದು ವೈಶಾಖ ಮಾಸದ ಪ್ರಕಾಶಮಾನವಾದ ಪೂರ್ಣಿಮೆಯ ದಿನ. ಆದರೆ ಕುಮಾರನನ್ನು ನೋಡುವ ಆನಂದವು ಮಹಾ ರಾಣಿಗೆ ಬಹಳ ಕಾಲ ಉಳಿಯಲಿಲ್ಲ. ಬಾಣಂತಿ ಯಾಗಿರುವಾಗಲೇ ಮಾಯಾದೇವಿ, ಶುದ್ಧೋದನ ನನ್ನು ದುಃಖಸಾಗರದಲ್ಲಿ ತೇಲಬಿಟ್ಟು ತೀರಿ ಹೋದಳು.

ಮಾತೃವಿಹೀನನಾದ ಕುಮಾರನನ್ನು ಮಹಾ ರಾಜನು ಕಣ್ಣಿನ ರೆಪ್ಪೆಯ ಹಾಗೆ ಕಾಪಾಡುತ್ತ, ನಾಮಕರಣ ಮಹೋತ್ಸವವನ್ನು ಜರುಗಿಸಿದನು. ಗೌತಮ ಸಿದ್ಧಾರ್ಥನೆಂದು ಮಗನಿಗೆ ನಾಮಕರಣ ವಾಯಿತು. ಸಿದ್ಧಾರ್ಥನು ಶುದ್ಧೋದನನ ಕಣ್ಮಣಿ ಯಾಗಿ, ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಾ ಬಂದನು.

ತರುವಾಯ ಜ್ಯೋತಿಷಿಗಳು ಸಿದ್ಧಾರ್ಥ ರಾಜ ಕುಮಾರನ ಜಾತಕವನ್ನು ಪರಿಶೀಲನೆ ಮಾಡಿದರು. ಕಡೆಗೆ ಅವರು ಮಹಾರಾಜನನ್ನು ನೋಡಿ, "ಈ ಕುಮಾರನು ಚಕ್ರವರ್ತಿಯಾಗುತ್ತಾನೆ. ಈ ವಿಶಾಲ ಪ್ರಪಂಚದೊಳಗಿನ ರಾಜಾಧಿರಾಜರೂ, ಪ್ರಜೆಗಳೂ ಇವನಿಗೆ ತಲೆಬಾಗಿ ಅಂಜಲೀಬದ್ಧರಾಗಿರುತ್ತಾರೆ..." ಎಂದು ಹೇಳುತ್ತಾ ಹೋದರು. ತಲೆದೂಗುತ್ತಾ ಕೇಳುತ್ತಿರುವ ಶುದ್ಧೋದನನ ಆನಂದಕ್ಕೆ ಮೇರೆ ಯಿಲ್ಲದೆ ಹೋಗುತ್ತಿತ್ತು.

"...ಆದರೆ...ಮಹಾರಾಜಾ ! ರಾಜಕುಮಾರನಿಗೆ ಸನ್ಯಾಸ ಯೋಗವಿದೆ" ಎಂದರು ಜ್ಯೋತಿಷ ಪಂಡಿತರು.

ಈ ಮಾತು ಶುದ್ಧೋದನನ ಎದೆಯೊಳಗೆ ಕಲ್ಲು ಬಿದ್ದ ಹಾಗಾಯಿತು, ಏನೂ ಅರ್ಥವಾಗದೆ ಮಿಕಿ ಮಿಕಿ ನೋಡಿದನು. "ಚಕ್ರವರ್ತಿಯಾಗುತ್ತಾನೆಂದು ಹೇಳುತ್ತ, ಸನ್ಯಾಸ ಯೋಗವಿದೆಯೆಂತಲೂ ಹೇಳುವಿರೇನಿದು ? ಒಂದಕ್ಕೊಂದು ಹೊಂದುವು

ದಿಲ್ಲವಲ್ಲಾ ಸ್ವಾಮಿ! ದಯವಿಟ್ಟು ವಿವರಿಸಿ ಹೇಳಿರಿ" ಎಂದನು ಶುದ್ಧೋದನ ಮಹಾರಾಜ.

ಪಂಡಿತರು ರಾಜಕುಮಾರನ ಜಾತಕ ಚಕ್ರದೊಳಗಿನ ಗ್ರಹಗತಿಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲನೆ ಮಾಡಿ, "ಮಹಾರಾಜಾ, ನಿಮ್ಮ ಈ ಕುಮಾರನದು ಅತಿ ಸುಕುಮಾರವಾದ ಮನಸ್ಸು, ಇವನು ನಾಲ್ಕು ದೃಶ್ಯಗಳನ್ನು ನೋಡಲೇ ಕೂಡದು. ಒಂದು ರೋಗ, ಎರಡನೆಯದು ವೃದ್ಧಾಪ್ಯ, ಮೂರನೆಯದು ಮೃತ್ಯು, ನಾಲ್ಕನೆಯದು ಸನ್ಯಾಸ. ಈ ನಾಲ್ಕು ದೃಶ್ಯಗಳನ್ನು ನೋಡಿದ ಮರುಕ್ಷಣದಲ್ಲಿ ಸಿದ್ಧಾರ್ಥ ಕುಮಾರನ ಮನಸ್ಸು ಒಡೆದುಹೋಗುತ್ತದೆ. ಆದುದರಿಂದ ತಕ್ಕ ಜಾಗರೂಕತೆಯಿಂದ ಇವನನ್ನು ಬೆಳೆಸಬೇಕು" ಎಂದು ಹೇಳಿದರು.

ಸಿದ್ಧಾರ್ಥನಿಗೆ ಚಿಕ್ಕತನದಿಂದಲೂ ಯಾವ ಬಗೆಯ ಚಿಂತೆಯೂ ಉಂಟಾಗದಂತೆ, ಯಾವಾಗಲೂ ಆಹ್ಲಾದಕರವಾಗಿಯೇ ಇರುವಂತೆ ಒಂದಲ್ಲೊಂದು ಆಟ ಪಾಟ ವಿನೋದ ವೈಭವಗಳೇ ನಡೆಯುವಂತೆ ಏರ್ಪಾಡಿಸಲಾಯಿತು. ತೆಗೆದುಕೊಳ್ಳಬೇಕಾದ ಎಲ್ಲಾ ಬಗೆಯ ಎಚ್ಚರಿಕೆಗಳನ್ನೂ ತೆಗೆದುಕೊಂಡನು ಶುದ್ಧೋದನ ರಾಜ.

ಒಂದು ದಿನ ಸಿದ್ಧಾರ್ಥನು ಉದ್ಯಾನವನದ ವೇದಿಕೆಯ ಮೇಲೆ ಸುಖಾಸೀನನಾಗಿದ್ದಾಗ, ಒಂದು ಹಂಸವು ಚಟಪಟನೆ ಒದರಾಡಿಕೊಳ್ಳುತ್ತಾ ಅವನ ಮಡಿಲ ಮೇಲೆ ಬಿತ್ತು. ರಾಜಕುಮಾರನು ಅದಕ್ಕೆ ಚುಚ್ಚಿಕೊಂಡಿದ್ದ ಬಾಣವನ್ನು ಜಾಗರೂಕತೆಯಿಂದ ಕಿತ್ತು, ಗಾಯಕ್ಕೆ ಮೂಲಿಕೆಯ ರಸಹಚ್ಚಿ ಅದರ ಪ್ರಾಣವನ್ನು ಕಾಪಾಡಿದನು.

"ಆ ಹಂಸ ನನ್ನದು. ಅದನ್ನು ಹೊಡೆದವನು ನಾನು" ಎಂದು ಗಟ್ಟಿಯಾಗಿ ಹೇಳುತ್ತ ದೇವದತ್ತನು ಅಲ್ಲಿಗೆ ಬಂದನು. ದೇವದತ್ತನು ಸಿದ್ಧಾರ್ಥನಿಗೆ ಜ್ಞಾತಿ ಸಹೋದರನಾಗಬೇಕು.



"ಈ ಹಂಸದ ಪ್ರಾಣವನ್ನು ನಾನು ಕಾಪಾಡಿದ್ದೇನೆ. ಆದುದರಿಂದ ಇದೀಗ ನನ್ನದೇ!" ಎಂದನು ಸಿದ್ಧಾರ್ಥ.

ದೇವದತ್ತನು ಬಿಡದೆ ತಗಾದೆ ಮಾಡಿದನು. ಇಬ್ಬರೂ ರಾಜಸಭೆಗೆ ಹೋಗಿ ತಮ್ಮ ವಿವಾದವನ್ನು ಮಂಡಿಸಿದರು. ಅಲ್ಲಿದ್ದ ಶಾಸ್ತ್ರವೇತ್ತರು, "ಪ್ರಾಣರಕ್ಷಕನಾದ ರಾಜಕುಮಾರನದೇ ಹಂಸ" ಎಂದು ಏಕಗ್ರೀವರಾಗಿ ತೀರ್ಪು ಹೇಳಿದರು.

ಈ ಕಾರಣದಿಂದಾಗಿ ಬಾಲ್ಯದಿಂದಲೇ ದೇವದತ್ತನಿಗೆ ರಾಜಕುಮಾರ ಸಿದ್ಧಾರ್ಥನ ಮೇಲೆ ಅಸೂಯೆಯೂ, ಸ್ಪರ್ಧೆಯೂ ಉಂಟಾಯಿತು.

ಸಾಧಾರಣವಾಗಿ ಶಾಕ್ಯರು ಸುಕ್ಷತ್ರಿಯರ ಹಾಗೆಯೇ ಆಯುಧೋಪಜೀವಿಗಳೇ, ಅವರಿಗೆ ಬೇಟೆಯ ಮೇಲೆ ಅತ್ಯಂತ ಪ್ರೀತಿ. ಬೇಟೆಯಾಟದಲ್ಲಿ ಬಹಳ ಪ್ರಸಿದ್ಧರೂ ಆಗುತ್ತಾರೆ. ಆದರೆ ರಾಜಕುಮಾರನಿಗೆ ಬೇಟೆಯ ಮೇಲೆ ಸ್ವಲ್ಪವೂ



ಇಷ್ಟವಿರಲಿಲ್ಲ. ಬಿಲ್ಲು ವಿದ್ಯೆಯನ್ನು, ಅದರಲ್ಲಿಯ ಲಕ್ಷ್ಯಸಿದ್ಧಿಯನ್ನು ಕಲಿತು ಚೆನ್ನಾಗಿ ಸಾಧಿಸಿದ್ದರೂ ಕೂಡ, ಸಹ ವಿದ್ಯಾರ್ಥಿಗಳಿಗಿಂತ ಹೆಚ್ಚಿನವನೆನಿಸಿದ್ದರೂ ಸಹ ಪ್ರಾಣಿಗಳನ್ನು ಕೊಲ್ಲುವುದೆಂದರೆ ರಾಜ ಕುಮಾರನಿಗಾಗದು. ಅದು ಒಳ್ಳೆಯ ಕೆಲಸವಲ್ಲ ವೆಂಬುದೇ ಅವನ ನಿರ್ಧಾರ.

ಸಿದ್ಧಾರ್ಥನು ಬೇಟೆಗೆ ಹೋಗಲಾರನು. ವಿನೋದ ಗಳ ಮೇಲೆ ಆಸಕ್ತಿ ತೋರಿಸುವುದಿಲ್ಲ, ಹಿಂಸೆಯನ್ನು ನೋಡಿ ತಳಮಳಿಸುತ್ತಾನೆ. ಕುಮಾರನ ಶರೀರದಲ್ಲಿ ರಕ್ತಕ್ಕೆ ಬದಲು ಕರುಣರಸವೇ ಪ್ರವಹಿಸುವುದೇನೋ ಎಂದು ಶುದ್ಧೋದನನು ಅಂದುಕೊಳ್ಳುತ್ತ, ರಾಜ ಕುಮಾರನ ಹಾಗೆ, ಯುವರಾಜನ ಹಾಗೆ ಸಿದ್ಧಾರ್ಥನು ತಯಾರಾಗಲು, ಎಷ್ಟು ಪ್ರಯತ್ನ ಮಾಡಬೇಕೋ ಅಷ್ಟೂ ಮಾಡಿಕೊಂಡೇ ಇದ್ದನು.

ರಾಜಕುಮಾರನು ನಗರದೊಳಗೆ ಹೊರಡುವ ನೆಂದಾದರೆ ಅವನು ಹೋಗುವ ದಾರಿಯಲ್ಲೆಲ್ಲಿಯೂ, ರೋಗಪೀಡಿತರು, ಮುದಿಗೊಡ್ಡುಗಳು, ಮೃತ ರಾದವರು, ಪರಿವ್ರಾಜಕರು, ಸನ್ಯಾಸಿಗಳು ಭಿಕ್ಷುಕರು ಕಣ್ಣಿಗೆ ಬೀಳದಂತೆ ಮುಂಜಾಗ್ರತೆ ತೆಗೆದುಕೊಂಡ ನಂತರವೇ ರಥದ ಸಾರಥಿಯಾದ ಚೆನ್ನನು ರಾಜ ಕುಮಾರನನ್ನು ರಥದ ಮೇಲೆ ಕೂರಿಸಿಕೊಂಡು ನಗರ ದೊಳಗೆ ಒಯ್ಯುತ್ತಿದ್ದನು.

ಹೀಗಿರಲು ಸಿದ್ಧಾರ್ಥನಿಗೆ ತಾರುಣ್ಯವು ಬಂದಿತು. ಅವನಲ್ಲಿ ಸತ್ಯಪ್ರಿಯತೆಯೂ, ತಾರ್ಕಿಕ ಬುದ್ಧಿಯೂ, ಹೇತುಬದ್ಧವಾದ ಜ್ಞಾನವೂ ತುಂಬಿದುವು. ಆಗಲೇ ಭೂಮಿಗೆ ಇಳಿದು ಬಂದ ಯಾವ ದೇವಸುಂದರನೋ ಎಂಬ ಹಾಗೆ ಕಾಣಿಸತೊಡಗಿದನು. ಆದರೆ ವಿನೋದ, ವಿಲಾಸಗಳಂತಹ ರಾಜಭೋಗಗಳ ಮೇಲೆ ಅವನ ಮನಸ್ಸು ಹೋಗುತ್ತಿರಲಿಲ್ಲ. ನಸುನಗುವಿನ ಗಂಭೀರ ಭಾವನೆಯಲ್ಲಿಯೇ ಇರುತ್ತಿದ್ದನು. ಯಾರ ಮೇಲೆಯೂ ಕೋಪತಾಪಗಳು ಅವನಿಗಿರಲಿಲ್ಲ.

ಈ ಬಗೆಯ ಕುಮಾರನ ಧೋರಣೆಯನ್ನು ನೋಡಿ ಶುದ್ಧೋದನ ರಾಜನು ವ್ಯಾಕುಲಪಡತೊಡ ಗಿದನು. ಕುಮಾರನಿಗೆ ಮದುವೆ ಮಾಡಬೇಕಾದ ತರುಣವು ಪ್ರಾಪ್ತವಾಗಿದೆ. ವಿವಾಹ ಮಾಡಿದರೆ ಅವನು ಬದಲಾವಣೆ ಹೊಂದುವನೆಂದುಕೊಂಡು, ಶುದ್ಧೋದನನು ರಾಜ್ಯದೊಳಗಿನ ಕ್ಷತ್ರಿಯ ವಂಶಕ್ಕೆ ಸೇರಿದ ಸುಂದರಿಯರಾದ ಕನ್ಯೆಯರೆಲ್ಲರನ್ನೂ ರಾಜ ಮಂದಿರಕ್ಕೆ ಆಹ್ವಾನಿಸಿ ಬರಮಾಡಿಸಿಕೊಂಡನು.

ರಾಜಕುಮಾರನ ದೃಷ್ಟಿ ಅವರ ಮೇಲೆ ಬೀಳು ವಂತೆ ಏರ್ಪಡಿಸಿದಂತಹ ಅಂತಃಪುರ ಮಂದಿರದಲ್ಲಿ ಕೆಲವು ಕನ್ನೆಯರು ತಮ್ಮ ನೃತ್ಯಗಾನಗಳನ್ನು ಪ್ರದರ್ಶನ ಮಾಡಿದರು. ಯುವರಾಜನ ಮನಸ್ಸನ್ನು ದೋಚಿಕೊಳ್ಳಲು ಒಬ್ಬರನ್ನು ಮೀರಿಸಿ ಒಬ್ಬರು ಒಯ್ಯಾರಗಳನ್ನು ತೋರಿಸುತ್ತ, ರಾಜಕುಮಾರನ ದೃಷ್ಟಿ ಯಾವಳ ಮೇಲೆ ನಿಲ್ಲುವುದೋ ಆ ಭಾಗ್ಯಕ್ಕೆ ಕನ್ಯಾಮಣಿಯರೆಲ್ಲ ತಹತಹಿಸಿಕೊಂಡಿದ್ದರು.




ಹೀಗೆ ಪ್ರದರ್ಶನವಿತ್ತ ಕನ್ಯೆಯರಿಗೆಲ್ಲ ಕಾಣಿಕೆಗಳನ್ನು ಕೊಟ್ಟು ಸತ್ಕರಿಸಲು, ಹರಿವಾಣಗಳ ತುಂಬಾ ಮಣಿಹಾರಗಳು, ಮುತ್ತಿನ ಗೊಂಚಲುಗಳು, ಸ್ವರ್ಣಭೂಷಣಗಳು ಸಾಲಾಗಿ ಇಡಲ್ಪಟ್ಟುವು. ಸುಂದರೀಮಣಿಯರು ಒಬ್ಬೊಬ್ಬರೇ ಓರೆನೋಟ ಬೀರುತ್ತ ಬಂದು, ಸಿದ್ಧಾರ್ಥನು ಎತ್ತಿಕೊಡುವ ಬಹುಮಾನಗಳನ್ನು ಪಡೆದುಕೊಂಡು ವಂದಿಸಿ ಹೋಗುತ್ತಿದ್ದರು.

ಬಂದವರೆಲ್ಲಾ ಕಾಣಿಕೆಗಳನ್ನು ತೆಗೆದುಕೊಂಡು ಹೋದ ಮೇಲೆ ಸಿದ್ಧಾರ್ಥನು ಆಸನದಿಂದ ಎದ್ದು ಅಲ್ಲಿಂದ ಹೋಗತೊಡಗಿದನು. ಆಗ ಜವ್ವನೆಯೊಬ್ಬಳು ಸ್ತಂಭದ ಮರೆಯಲ್ಲಿ ನಿಂತಿರುವುದನ್ನು ನೋಡಿದನು. ಸ್ತಂಭಕ್ಕೆ ಒರಗಿ ತಲೆ ತಗ್ಗಿಸಿಕೊಂಡು ನಿಂತಿದ್ದ ಅವಳಲ್ಲಿ ಸೌಂದರ್ಯಕ್ಕೆ ಮೀರಿದ ಯಾವುದೋ ಒಂದು ಸೌಂದರ್ಯವು ಸಿದ್ಧಾರ್ಥನಿಗೆ ತೋರಿತು. ಅವಳ ಪ್ರಶಾಂತ ವದನದಲ್ಲಿ ತುಂಬಿದ ಸೌಜನ್ಯವು ಹೊರಹೊಮ್ಮುತಿದ್ದಿತು. ಅವಳ ಹೆಸರು ಯಶೋಧರೆ. ಅವಳು ಸಾಮಂತನೊಬ್ಬನ ಕುಮಾರಿ.

ಅವಳಿಗೆ ಕೊಡಲು ಯಾವುದೊಂದು ಕಾಣಿಕೆಯೂ ಉಳಿದಿರಲಿಲ್ಲ. ಲಜ್ಜೆಯಿಂದಲೋ ದಾಕ್ಷಿಣ್ಯದಿಂದಲೋ ಅವಳು ಯಾವ ಶೃಂಗಾರ ಪ್ರದರ್ಶನವನ್ನೂ ತೋರಿಸಿರಲಿಲ್ಲ. ಬಹುಮಾನ ಪಡೆಯಲೂ ಬಂದಿಲ್ಲ. ಸಿದ್ಧಾರ್ಥನು ತನ್ನ ಕೊರಳಲ್ಲಿದ್ದ ಮರಕತ ಹಾರವನ್ನು ತೆಗೆದು ಅವಳ ಸೊಂಟದ ಸುತ್ತಲೂ ಸುತ್ತಿದನು. ಅವನ ಕೊರಳಿಗೆ ಸರಿಹೊಂದಿದ ಆ ಹಾರವು ಅವಳ ನಡುವಿಗೆ ಸಡಿಲಾಗಿ ಹೊಂದಿಕೊಂಡಿತು.

ಅದೇ ಕ್ಷಣದಲ್ಲಿ ಸಿದ್ಧಾರ್ಥನಿಗೆ ಯಶೋಧರೆಯ ಮೇಲೆ ಅನುರಾಗವು ಅಂಕುರಿಸಿತು. ಅವನ ಮನಸ್ಸು ಅವಳಲ್ಲಿ ಲಗ್ನವಾಗಿದೆ ಎಂದು ಮಹಾರಾಜನಿಗೆ ಗೊತ್ತಾಯಿತು.

ಸಿದ್ಧಾರ್ಥನ ರಾಗೋದಯವನ್ನು ನೋಡಿ ಶುದ್ಧೋದನ ಮಹಾರಾಜನಿಗೆ ಬಹಳ ಸಂತೋಷವಾಯಿತು. ಅವಳ ತಂದೆ ಸಾಮಂತನಿಗೆ ತಾನು ಬೀಗತನ ಹೊಂದುವ ಶುಭ ಸಮಾಚಾರವನ್ನು ಕೂಡಲೇ ಕಳುಹಿಸಿದನು.

ಈ ಸಮಯದಲ್ಲಿ ದೇವದತ್ತನು, ಈ ಮದುವೆ ಹೀಗೆ ನಡೆಯಬಾರದೆಂದೂ, ಸ್ವಯಂವರವನ್ನು ಪ್ರಕಟಿಸಿ, ಸ್ಪರ್ಧೆ ಪರೀಕ್ಷೆಗಳನ್ನು ಇಡಬೇಕೆಂದೂ ಹಟ ಹಿಡಿದನು. ಆದರಂತೆ ಯಶೋಧರೆಯ ತಂದೆ, ಸ್ವಯಂವರದ ಸ್ಪರ್ಧೆಗೆ ಬರುವಂತೆ ಎಲ್ಲರಿಗೂ ಆಹ್ವಾನಗಳನ್ನು ಕಳುಹಿಸಿದನು.

ಆದರೆ ಹಿಂಸೆಗೆ ತಾವಿಲ್ಲದಂತಹ ಅನೇಕ ವಿದ್ಯೆಗಳ ಮೇಲೆ ಸ್ಪರ್ಧೆಯ ಪ್ರದರ್ಶನಗಳು ಏರ್ಪಡಿಸಲ್ಪಟ್ಟುವು. ಅನೇಕ ಮಂದಿ ಯುವಕರು ಅದರಲ್ಲಿ ಭಾಗವಹಿಸಿದರು. ಆ ಎಲ್ಲಾ ಪರೀಕ್ಷೆಗಳಲ್ಲಿಯೂ ರಾಜಕುಮಾರ ಸಿದ್ಧಾರ್ಥನೇ ಗೆದ್ದು ಗೆದ್ದು ನಿಂತನು.



ಸಿದ್ಧಾರ್ಥನೊಂದಿಗೆ ಸರಿಸಮವಾಗಿ ಪ್ರತಿದ್ವಂದಿಯಾದವನು ದೇವದತ್ತನೇ. ಕಡೆಗೆ ದೇವದತ್ತನು ಕೂಡಾ ಸಿದ್ಧಾರ್ಥನ ದೇಹ ಶಕ್ತಿಯ ಮುಂದೆ ಸೋತುಹೋದನು. ಸಿದ್ಧಾರ್ಥನು ಬಿಲ್ಲು ವಿದ್ಯೆಯ ಗುರಿಯಲ್ಲಿ, ಅಶ್ವಾರೋಹಣದಲ್ಲಿ ಅಪೂರ್ವ ಸಾಮರ್ಥ್ಯವನ್ನು ತೋರಿಸಿ, ಯಶೋಧರೆಯ ಪಾಣಿ ಕಮಲವನ್ನು ಗೆದ್ದುಕೊಂಡನು.

ಸಿದ್ಧಾರ್ಥ ಯಶೋಧರೆಯರ ವಿವಾಹವು ಅತ್ಯಂತ ವೈಭವದಲ್ಲಿ ನೆರವೇರಿತು.

ಶುದ್ಧೋದನ ಮಹಾರಾಜನಿಗೆ ಈಗ ಸ್ವಲ್ಪ ಮನಃಶಾಂತಿ ಲಭಿಸಿತು. "ಕುಮಾರನು ಗೃಹಸ್ಥನಾದನು. ಇನ್ನು ಸಂಸಾರ ಚಕ್ರದಲ್ಲಿ ಸಿಕ್ಕಿ, ಸರಾಗವಾಗಿ ಪ್ರತಿಭೆಗಳನ್ನು ಹೊರಡಿಸಿ ಚಕ್ರವರ್ತಿಯಾಗಿಯೇ ಆಗುತ್ತಾನೆ" ಎಂದುಕೊಳ್ಳುತ್ತ ಸಂತೋಷಪಟ್ಟನು. ಅವನ ಸಂತೋಷವು ಹುಸಿ ಹೋಗಲಿಲ್ಲ. ನಿಜಕ್ಕೂ ಯಶೋಧರೆ ಸಿದ್ಧಾರ್ಥನಿಗೆ ಎಲ್ಲಾ ವಿಧದಲ್ಲಿಯೂ ತಕ್ಕ ಭಾಗ ಸ್ವಾಮಿನಿಯಾಗಿದ್ದಳು. ಅದರ ಮೇಲೆ ತನ್ನ ಗಂಡನಲ್ಲಿ ಅಸಾಧಾರಣವಾದ ಬೆಲೆಬಾಳುವ ಮಾನವತ್ವವಿದೆಯೆಂದೂ ಅವಳು ತಿಳಿದುಕೊಂಡಳು. ಅದಕ್ಕೆ ಅನುಕೂಲವಾಗಿ ಬಹಳ ಜಾಗರೂಕತೆಯಿಂದ ನಡೆದುಕೊಳ್ಳುತ್ತಿದ್ದಳು. ಅವರಿಬ್ಬರ ದಾಂಪತ್ಯವು ಆನಂದಪ್ರದವಾಗಿ ಸಾಗಿಕೊಂಡಿದ್ದಿತು.

ವಿವಾಹವಾದ ಮೇಲೆ ಸಿದ್ಧಾರ್ಥನು ಅಂತಃಪುರವನ್ನು ಬಿಟ್ಟು ಎಲ್ಲಿಗೂ ಹೋಗಲಿಲ್ಲ. ಹೋಗುವ ವಿಚಾರವನ್ನೇ ಬಿಟ್ಟುಬಿಟ್ಟನು.

ಕೆಲವು ದಿನಗಳ ಮೇಲೆ ಆ ದಂಪತಿಗಳಿಗೆ ಒಬ್ಬ ಮಗನು ಹುಟ್ಟಿದನು. ಆ ಮಗುವಿಗೆ ರಾಹುಲನೆಂದು ನಾಮಕರಣವೂ ಆಯಿತು. ತಂದೆತಾಯಿಯರಿಗೂ, ತಾತ ಶುದ್ಧೋದನ ಮಹಾರಾಜನಿಗೂ ಮುದ್ದಿನ ಮೂಟೆಯಾಗಿ ರಾಹುಲನಿದ್ದನು.

ಒಂದು ದಿನ ಸಿದ್ಧಾರ್ಥನು ರಥವನ್ನು ನೋಡಿ, ಅದರ ಮೇಲೆ ಏರಿ ಕುಳಿತು, ಚೆನ್ನನನ್ನು ಕರೆದು ರಥವನ್ನು ಸಾಗಿಸಲು ಹೇಳಿದನು. ಅಂದುಕೊಳ್ಳದ ಈ ಘಟನೆಯಿಂದ ಚೆನ್ನನು ಹಿಂದೆ ಮುಂದೆ ನೋಡಿದನು. ಆದರೆ ರಾಜಕುಮಾರನ ದೃಢ ಸಂಕಲ್ಪವನ್ನು ತಿಳಿದವನಾದುದರಿಂದ, ತನ್ನಿಂದಾಗದೆನ್ನದೆ, ರಥವನ್ನು ಸಾಗಿಸಿಕೊಂಡು ಹೋದನು.

ಆಗ ದಾರಿಯಲ್ಲಿ ಜರಾಭಾರದಿಂದ ಬೀಳುತ್ತ ಏಳುತ್ತ, ನಡುಗುತ್ತ ಮುದುಕನೊಬ್ಬನು ಇದಿರಾಗಿ ಬರುವುದನ್ನು ಸಿದ್ಧಾರ್ಥನು ನೋಡಿದನು. ಆ ವೃದ್ಧನ ಸ್ಥಿತಿ ತುಂಬಾ ದಯನೀಯವಾಗಿತ್ತು. ಯಾರೂ ಆ ವೃದ್ಧನನ್ನು ನೋಡುವುದೋ, ಕನಿಕರಿಸುವುದೋ, ಕೈಹಿಡಿದು ನಡೆಸುವುದೋ ಮಾಡದೆ ಅವರವರ ಪಾಡಿಗೆ ಅವರವರು ಹೋಗುತ್ತಿದ್ದನು.

ಸ್ವಲ್ಪ ದೂರ ಹೋದ ಮೇಲೆ ಒಬ್ಬ ರೋಗಪೀಡಿತನು ಇದಿರಾದನು. ಅವನು ದಟ್ಟದರಿದ್ರನೆಂದು ಎದ್ದು ಕಾಣುತ್ತಿತ್ತು. ಅದರ ಮೇಲೆ

ದುಶ್ಶಟದವನೆಂದು ಹೆಜ್ಜೆ ಹೆಜ್ಜೆಗೂ ಕುಡಿಕೆಯನ್ನೆತ್ತಿ ಕುಡಿಯುವ ಸುರಾಪಾನವು ಹೇಳುತ್ತಿದ್ದಿತು.

ಆದಾದ ಮೇಲೆ ಸ್ಮಶಾನಕ್ಕೆ ಶವವಾಹಕರಿಂದ ಸಾಗಿಸಲ್ಪಡುತ್ತಿದ್ದ ಒಂದು ಶವದ ದೃಶ್ಯ ಇದಿರಾಗಿ ಮುಂದೆ ಹೋಯಿತು.

ಕಡೆಗೆ ಸರ್ವಸಂಗ ಪರಿತ್ಯಾಗ ಮಾಡಿದ ಒಬ್ಬ ಸನ್ಯಾಸಿ ಇದಿರಾದನು.

ಆಗಲೇ ಗೌತಮ ಸಿದ್ಧಾರ್ಥನು ಬುದ್ಧನಾಗಲು ಅಂಕುರಾರ್ಪಣೆಯಾಯಿತು.

ರಾಜಕುಮಾರನು ತಾನು ನೋಡಿದ ಆ ದೃಶ್ಯಗಳನ್ನು ಕುರಿತು ಸಾರಥಿ ಚೆನ್ನನನ್ನು ಚುಚ್ಚಿ ಚುಚ್ಚಿ ಕೇಳಿದನು. ಸಂಧಿಗ್ಧದಲ್ಲಿ ಸಿಕ್ಕಿಬಿದ್ದ ಚೆನ್ನನಿಗೆ ನಿಜ ಹೇಳದೆ ಗತ್ಯಂತರವಿಲ್ಲದೆ ಹೋಯಿತು.

ಸಿದ್ಧಾರ್ಥನು ರಥವನ್ನು ಹಿಂದಕ್ಕೆ ಮರಳಿಸುವಂತೆ ಹೇಳಿದನು. ಚೆನ್ನನು ರಥವನ್ನು ರಾಜಮಂದಿರಕ್ಕೆ ಹಿಂದಿರುಗಿಸಿ ತಂದನು.

ಆ ರಾತ್ರಿ ಸಿದ್ಧಾರ್ಥನಿಗೆ ನಿದ್ದೆಯೇ ಬರಲಿಲ್ಲ. ಹೊರಗೆ ಮಂದವಾಗಿ ಬೆಳುದಿಂಗಳು ಪಸರಿಸಿಕೊಂಡಿತ್ತು.

ಯಶೋಧರೆ ನಿದ್ದೆಯಲ್ಲಿ ಮುಳುಗಿದ್ದಾಳೆ. ರಾಹುಲನು ತಾಯಿಯ ಎದೆಗೆ ಅಂಟಿಕೊಂಡು ನಿದ್ರಿಸುತ್ತಿದ್ದಾನೆ. ತಾಯಿ ಮಗಂದಿರ ಮುಖಗಳಲ್ಲಿ ಮುಗ್ಧಭಾವವು ತೇಲಿಕೊಂಡಿದೆ. ಅದನ್ನೆಲ್ಲವನ್ನು ನೋಡುತ್ತಾ ಇದ್ದ, ಸಿದ್ಧಾರ್ಥನು ಅವರನ್ನು ಬಿಟ್ಟು ಕೆಲವು ಅಡಿಗಳನ್ನು ನಡೆದು, ತಿರುಗಿ ಅವರ ಬಳಿಗೆ ಬಂದನು. ಹೀಗೆ ಎರಡು ಸಾರಿ ನಡೆಯಿತು.

ಮೂರನೇ ಸಾರಿ ಸಿದ್ಧಾರ್ಥನು ಮನಸ್ಸನ್ನು ದೃಢಪಡಿಸಿಕೊಂಡು, ಯಶೋಧರೆಯ ಪಾದಗಳ ಮೇಲೆ ಒಂದು ಕೋಳೆಯ ಹೂವನ್ನಿಟ್ಟು, ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿ, ಅಲ್ಲಿಂದ ಹೊರಟುಬಿಟ್ಟನು.

ಅವನು ನೆಟ್ಟಗೆ ಅಂತಃಪುರದಿಂದ ಅಶ್ವಶಾಲೆಗೆ ಹೋದನು. ಚೆನ್ನನನ್ನು ಎಬ್ಬಿಸಿ ಕುದುರೆಯನ್ನು ಸಿದ್ಧಪಡಿಸಲು ಹೇಳಿದನು.

ರಾಜಕುಮಾರನಿಗೆ ಅರ್ಧರಾತ್ರಿಯ ಬೆಳುದಿಂಗಳಿನಲ್ಲಿ ಕುದುರೆಯ ಮೇಲೆ ವಿಹರಿಸಬೇಕೆಂದು ತೋರಿತೇನೋ ಎಂದುಕೊಂಡು ಕುದುರೆಯನ್ನು ಸಿದ್ಧಪಡಿಸಿದನು ಚೆನ್ನ. ಸ್ವಲ್ಪ ಮುಂಚೆ ಹನಿ ಹನಿ ಮಳೆ ಬಂದುದರಿಂದ ನೆಲವು ನೆನೆದು ಮೆತ್ತಗಿದ್ದಿತು.

ಸಿದ್ಧಾರ್ಥನು ಕುದುರೆಯ ಮೇಲೇರಿ ಕುಳಿತನು.

ಚೆನ್ನನು ಕಡಿವಾಣವನ್ನು ಹಿಡಿದುಕೊಂಡು ನಡೆಯತೊಡಗಿದನು. ಎಲ್ಲೆಲ್ಲಿಯೂ ನಿಃಶಬ್ದವಾಗಿದ್ದಿತು. ಕುದುರೆಯ ಗೊರಸಿನ ಶಬ್ದವು ಮೆತ್ತಗಿನ ನೆಲದಲ್ಲಿ ಯಾರಿಗೂ ಕೇಳಿಸಲಿಲ್ಲ.







# ಹಸ್ತಸಾಮುದ್ರಿಕ

ಅನೇಕ ವರ್ಷಗಳ ಹಿಂದೆ ಮುನಿಹಳ್ಳಿ ಎಂಬ ಊರಿನಲ್ಲಿ ಕೃಷ್ಣಶಾಸ್ತ್ರಿ ಎಂಬ ಹಸ್ತಸಾಮುದ್ರಿಕವೇತ್ತ ನಿದ್ದನು. ಅವನು ಆ ಊರಿನಲ್ಲಿ ಮಾತ್ರವಲ್ಲದೆ, ಸುತ್ತ ಮುತ್ತಲಿನ ಅನೇಕ ಗ್ರಾಮಗಳಲ್ಲಿ ಕೂಡಾ ಹೆಸರು ಪಡೆದವನಾಗಿದ್ದನು. ಆದರೆ ಅತ್ಯಂತ ಬಡತನದಲ್ಲಿ ಅವನ ದಿನಗಳು ಕಳೆಯುತ್ತಿದ್ದುವು. ಅದಕ್ಕೆ ಕಾರಣವೇನೆಂದರೆ, ಅವನು ಅಷ್ಟು ದೊಡ್ಡ ಪಂಡಿತನಾಗಿದ್ದು, ಕೂಡ, ಹಣಕ್ಕೆ ಮುಖ್ಯತ್ವ ಕೊಡುತ್ತಿರಲಿಲ್ಲ. ಬಡವರಂತೂ ಸರಿಯೆ, ಶ್ರೀಮಂತರಾರಿಂದಲೂ ಸಹಾ ಅವನು ತಕ್ಕ ಪ್ರತಿಫಲವನ್ನು ಕೇಳದೆ ಅವರು ಕೊಡುವುದನ್ನಷ್ಟೇ ತೃಪ್ತಿಯಿಂದ ತೆಗೆದುಕೊಳ್ಳುತ್ತಿರುವ ಗುಣದವನು.

ಅವನ ಹೆಂಡತಿ ರಾಜಲಕ್ಷ್ಮಿಗೆ ಗಂಡನ ಈ ಗುಣವು ಸ್ವಲ್ಪವೂ ಹಿಡಿಸಲಿಲ್ಲ. ಅವನ ಹತ್ತಿರ ಬಂದು ಜೋಸ್ಯ ಕೇಳುವ ಧನವಂತರಿಂದ ಮೊದಲೇ ಇಷ್ಟು ಪ್ರತಿಫಲವೆಂದು ಹೇಳಿ ಚೆನ್ನಾಗಿ ಹಣ ಸಂಪಾದನೆ ಮಾಡಬೇಕೆಂದು ಆಗಾಗ ಗಂಡನೊಡನೆ ಹೇಳುತ್ತಿದ್ದಳು. ಆದರೆ ಕೃಷ್ಣಶಾಸ್ತ್ರಿ "ಈ ಹಸ್ತಸಾಮುದ್ರಿಕವೆಂಬುದು ದೊಡ್ಡ ಶಾಸ್ತ್ರ, ಕೋಟೀಶ್ವರನಾದವನು ಕೂಡಾ ನನ್ನ ಹತ್ತಿರ ಬಂದು ಕೈ ತೋರಿಸಿಕೊಂಡು, ನನ್ನ ಮೇಲೆ ಬಹಳ ಭಕ್ತಿ ಶ್ರದ್ಧೆಗಳನ್ನು ತೋರಿಸಿ ಹೋಗುತ್ತಾನೆ. ಅಂತಹ ಪರಿಸ್ಥಿತಿಯಲ್ಲಿ ನಾನು ಅವರ ಮುಂದೆ ಇಂತಿಷ್ಟು ಕೊಡಿರೆಂದು ಕೇಳುವುದು ಅದೊಂದು ವ್ಯಾಪಾರವಾಗಿ ಕುಳಿತುಬಿಡುತ್ತದೆ. ಆಗ ಪಂಡಿತನಾದ ನನ್ನನ್ನು ಎಲ್ಲರೂ ವ್ಯಾಪಾರಿಯನ್ನು ನೋಡಿದ ಹಾಗೆಯೇ ನೋಡುತ್ತಾರೆ. ಪಾಂಡಿತ್ಯದ ಮೇಲೆ ಜನರ ಗೌರವವೇ ಹೋಗಿಬಿಡುತ್ತದೆ" ಎನ್ನುತ್ತಿದ್ದನು.

"ಹೀಗಿದ್ದರೆ ಎಂದೆಂದಿಗೂ ಇಷ್ಟೇ ಅಂತಾಯಿತು. ನಮ್ಮ ದಾರಿದ್ರ್ಯವು ಎಂದಿಗೂ ತೀರುವಂತಹುದಲ್ಲ! ಒಳ್ಳೇ ಹಣೇಬರಹವಾಯಿತು!" ಎನ್ನುವಳು ಹೆಂಡತಿ ಚಿಂತೆಯಿಂದ.

ಕ್ರಮವಾಗಿ ಕೃಷ್ಣಶಾಸ್ತ್ರಿ ಹಸ್ತಸಾಮುದ್ರಿಕದಲ್ಲಿ ಉದ್ದಂಡ ಪಂಡಿತನೆಂಬ ಸಂಗತಿ ಆ ದೇಶವನ್ನಾಳುವ ರಾಜನಿಗೆ ಗೊತ್ತಾಯಿತು. ಅವನ ಆಸ್ಥಾನದಲ್ಲಿ ಎಲ್ಲಾ ವಿದ್ಯೆಗಳಲ್ಲಿಯೂ, ಕಲೆಗಳಲ್ಲಿಯೂ ಪಾರೀಣತರಾದ ಪಂಡಿತರು ಅನೇಕರಿದ್ದರು. ಆದರೆ ಹಸ್ತಸಾಮುದ್ರಿಕಾ ಶಾಸ್ತ್ರದಲ್ಲಿ ಪಂಡಿತರಿರಲಿಲ್ಲ.

ಕೆ. ಕೆ. ರಾವು



ರಾಜನಿಗೆ ಕೃಷ್ಣಶಾಸ್ತ್ರಿಯನ್ನು ತನ್ನ ಆಸ್ಥಾನದಲ್ಲಿ ಸೇರಿಸಿಕೊಳ್ಳಬೇಕೆಂಬ ಆಲೋಚನೆ ಬಂದಿತು. ಆದರೆ ಮೊದಲು ಆತನನ್ನು ತಾನೇ ಸ್ವತಃ ಪರೀಕ್ಷಿಸಿ ನೋಡಬೇಕೆಂದು ಅಂದುಕೊಂಡನು. ಈ ಸಂಗತಿಯನ್ನು ಮಂತ್ರಿಯೊಂದಿಗೆ ಹೇಳಿ, ಇಬ್ಬರೂ ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ, ಕೃಷ್ಣಶಾಸ್ತ್ರಿಯನ್ನು ಗೌರವದಿಂದ ತನ್ನ ಬಳಿಗೆ ಕರೆಯಿಸುವಂತೆ ಅಪ್ಪಣೆ ಮಾಡಿದನು ಮಂತ್ರಿ.

ಆ ಪ್ರಕಾರ ಮಂತ್ರಿ ಕಳುಹಿಸಿದ ಭಟರು ಕೃಷ್ಣಶಾಸ್ತ್ರಿಯ ಹತ್ತಿರ ಬಂದು, ಆತನನ್ನು ರಾಜಾಸ್ಥಾನಕ್ಕೆ ಬರಬೇಕೆಂದು ಕೇಳಿಕೊಂಡನು. ಇದನ್ನು ಕೇಳಿ ಗ್ರಾಮದ ಜನರು ಕೃಷ್ಣಶಾಸ್ತ್ರಿಗೆ ದೊಡ್ಡ ದಶೆ ಬಂದಿತೆಂದು ಬಹಳ ಸಂತೋಷಪಟ್ಟರು. ಹೆಂಡತಿ ರಾಜಲಕ್ಷ್ಮಿಗಂತೂ ಇಂದಿಗೆ ತಮ್ಮ ದಾರಿದ್ರ್ಯವೆಲ್ಲಾ ತೀರಿಹೋಯಿತೆಂದು ಆನಂದದಿಂದ ತುಂಬಿಕೊಂಡಳು.

ಆದರೆ ಕೃಷ್ಣಶಾಸ್ತ್ರಿ ಮಾತ್ರ ನಿರ್ವಿಕಾರವಾಗಿ ಕುಳಿತುಕೊಂಡು ಏನೋ ಆಲೋಚಿಸ ತೊಡಗಿದನು. ಅದನ್ನು ನೋಡಿ ಊರಿನವರಿಗೆಲ್ಲಾ ಆಶ್ಚರ್ಯವಾಯಿತು. ಅವನ ಹೆಂಡತಿಗೆ ಕೋಪವು ಉಕ್ಕಿಕೊಂಡು ಬರತೊಡಗಿತು.

ಅವಳು ಗಂಡನಿಗೆ ಪ್ರಯಾಣಕ್ಕೆ ತಯಾರಾಗಿರೆಂದು ಹೇಳಲು ನೋಡುವಾಗ, ಕೃಷ್ಣಶಾಸ್ತ್ರಿ ರಾಜಭಟರನ್ನು ನೋಡಿ, "ನಾನು ಇವತ್ತಿನವರೆಗೂ ಯಾರ ಮನೆಗೂ ಹೋಗಿ ಹಸ್ತಸಾಮುದ್ರಿಕವನ್ನು ಹೇಳಿದವನಲ್ಲ. ಅಗತ್ಯವಿದ್ದವರು ಎಂಥವರೇ ಆದರೂ ನನ್ನ ಬಳಿಗೇ ಬರುತ್ತಾರೆ. ನನಗೆ ಎಲ್ಲರೂ ಒಂದೇ. ಈ ಮಾತನ್ನೇ ಮಹಾರಾಜರೊಂದಿಗೆ ಹೇಳಿಬಿಡಿರಿ" ಎಂದನು.

ರಾಜನ ಕರೆಯನ್ನೇ ನಿರಾಕರಿಸಿದುದರಿಂದ ಕೃಷ್ಣಶಾಸ್ತ್ರಿಗೆ ಹೋಗುವ ಕಾಲ ಬಂತೆಂದೂ ಖಂಡಿತ ಏನೋ ದಂಡನೆಗೆ ಗುರಿಯಾಗುವನೆಂದೂ ಜನರೂ, ಅವನ ಹೆಂಡತಿಯೂ ಅಂದುಕೊಂಡು ತುಂಬ ಹೆದರಿದರು.

ಭಟರು ಹೇಳಿದುದನ್ನು ಕೇಳಿ ರಾಜನು ಕ್ಷಣಕಾಲ ಬೆರಗಾಗಿಬಿಟ್ಟನು. ತರುವಾಯ ಮಂತ್ರಿಯನ್ನು ಕರೆಯಿಸಿ ಪ್ರಸ್ತಾವಿಸತೊಡಗಿದನು. ಅನಂತರ ಸಮಾಧಾನವಾಯಿತು ರಾಜನಿಗೆ.

ಒಂದು ವಾರದ ಮೇಲೆ ಸ್ವತಃ ರಾಜನೇ ಮೇನೆಯಲ್ಲಿ ಆರೋಹಿಸಿ ತಮ್ಮ ಗ್ರಾಮಕ್ಕೆ ಬರುವುದನ್ನು ನೋಡಿ, ಊರವರೆಲ್ಲಾ ಸಂಭ್ರಮಾಶ್ಚರ್ಯಗಳಿಂದ ಮುಳುಗಿಹೋದರು. ಕೃಷ್ಣಶಾಸ್ತ್ರಿಯ ಹೆಂಡತಿ ರಾಜನಿಗೆ ಹೇಗೆ ಮರ್ಯಾದೆ ತೋರಿಸಬೇಕೆಂದು ತಿಳಿಯದೆ ಮತಿಮಂಕಳಾದಳು. ಕೈಯೂ ಕಾಲೂ ಓಡದಂತಾಯಿತು ಅವಳಿಗೆ.

ಕೃಷ್ಣಶಾಸ್ತ್ರಿ ಮಾತ್ರ ಹಾಗೇನೂ ತಬ್ಬಿಬ್ಬಾಗದೆ ಮಹಾರಾಜನನ್ನು ಗೌರವದಿಂದ ಸ್ವಾಗತಿಸಿ, ಅವನು

ಬಂದ ಕಾರಣವೇನೆಂದು ವಿಚಾರಿಸಿದನು. ಸಂಗತಿ ತಿಳಿದು ರಾಜನ ಹಸ್ತವನ್ನು ಹಿಡಿದು ಪರೀಕ್ಷಿಸಿದನು. ರಾಜನು ಗಂಭೀರಭಾವದಲ್ಲಿ ಕೃಷ್ಣಶಾಸ್ತ್ರಿಯ ಮುಖವನ್ನೇ ನೋಡುತ್ತಿದ್ದನು. ರಾಜನೊಂದಿಗೆ ಬಂದಿದ್ದ ಇಬ್ಬರು ಭಟರು ದೂರದಲ್ಲಿ ನಿಂತು ಎಲ್ಲಾ ಗಮನಿಸುತ್ತಿದ್ದರು.

ಕೃಷ್ಣಶಾಸ್ತ್ರಿ ರಾಜನ ಹಸ್ತರೇಖೆಗಳನ್ನು ಅರ್ಧ ಗಂಟೆಯವರೆಗೆ ಪರೀಕ್ಷಿಸಲು ಅವನ ಮುಖದಲ್ಲಿ ಏನೋ ಅಯೋಮಯತೆ ಕಾಣತೊಡಗಿತು. ಆ ಹಸ್ತರೇಖೆಗಳಲ್ಲಿ ಒಂದರಲ್ಲಿ ಕೂಡಾ ರಾಜಯೋಗದ ಲಕ್ಷಣವೇ ಇರಲಿಲ್ಲ. ಈ ಹಸ್ತದವನು ಜೀವಿತ ಕಾಲವೆಲ್ಲಾ ಪರರಿಗೆ ಸೇವೆಮಾಡಿ ಹೊಟ್ಟೆ ಹೊರೆದು ಕೊಳ್ಳಬೇಕು.

ಕೃಷ್ಣಶಾಸ್ತ್ರಿ ಸಣ್ಣದೊಂದು ಉಸಿರುಬಿಟ್ಟು, ರಾಜನೊಂದಿಗೆ, "ಮಹಾರಾಜಾ, ಕ್ಷಮಿಸಿರಿ. ನನಗಿರುವ ಶಾಸ್ತ್ರಜ್ಞಾನವು ಅತ್ಯಲ್ಪವೆಂದು ಸ್ಪಷ್ಟವಾಯಿತು. ಹಸ್ತರೇಖೆಯ ಫಲಿತವನ್ನು ಗುಣಿಸಿ ನೋಡಿದರೆ ನಿಮಗೆ ಯಾವ ದೇಶಕ್ಕೂ ರಾಜರಾಗುವ ಯೋಗವು ಕಾಣುವುದಿಲ್ಲ. ಆದರೂ ನೀವು ನಮ್ಮ ಮಹಾರಾಜರಾಗಿದ್ದೀರಿ !" ಎಂದು ಹೇಳಿ, ಬದಿಯಲ್ಲಿದ್ದ ತಾಳ ಪತ್ರ ಗ್ರಂಥಗಳನ್ನು ಒಂದು ಮೂಲೆಗೆ ಬಿಸುಟು, ಬೆಂಕಿ ತರುವಂತೆ ಹೆಂಡತಿಗೆ ಆಜ್ಞೆ ಮಾಡಿದನು.

ಅದನ್ನು ಕೇಳಿ ಕೃಷ್ಣಶಾಸ್ತ್ರಿಯ ಹೆಂಡತಿ ಸ್ತಂಭಿಸಿ ನಿಂತಳು. ಕೃಷ್ಣಶಾಸ್ತ್ರಿ ಕೋಪದಿಂದ ಅವಳನ್ನು ನೋಡಿ, ಬೆಂಕಿ ತಾರೆಂದು ಮತ್ತೊಮ್ಮೆ ಹೇಳಲಿದ್ದನು. ಅದುವರೆಗೂ ದೂರದಲ್ಲಿ ನಿಂತಿದ್ದ ರಾಜ ಭಟರಿಬ್ಬರೂ ಅವನ ಹತ್ತಿರಕ್ಕೆ ಬಂದರು.

ಅವರಲ್ಲಿ ಒಬ್ಬನು ಕೃಷ್ಣಶಾಸ್ತ್ರಿಗೆ ನಮಸ್ಕಾರ ಮಾಡಿ, "ಅಯ್ಯಾ, ನೀವು ಸಾಮುದ್ರಿಕ ಶಾಸ್ತ್ರದಲ್ಲಿ ಪಾರಂಗತರಾದವರೆನ್ನಲು ಸಂದೇಹವೇನಿಲ್ಲ, ಈವರೆಗೂ ನೀವು ಪರೀಕ್ಷೆ ಮಾಡಿದ ಕೈ ಮಹಾರಾಜರದು ಅಲ್ಲ. ಅವರ ಪ್ರಧಾನ ಸೇವಕನದು. ಇಗೋ ! ಭಟನ ವೇಷದಲ್ಲಿರುವ ಇವರು ಮಹಾರಾಜರು. ನಾನು ಅವರ ಮಂತ್ರಿ. ಹೀಗೆ ನಿಮ್ಮನ್ನು ಪರೀಕ್ಷೆ ಮಾಡಿಸಿದವನು ನಾನೇ. ನನ್ನನ್ನು ಕ್ಷಮಿಸಬೇಕು" ಎಂದನು.

ಇದನ್ನು ಕೇಳಿದ ಕೃಷ್ಣಶಾಸ್ತ್ರಿಗೂ ಅವನ ಹೆಂಡತಿಗೂ ಊರವರಿಗೂ ಆದ ಆನಂದಕ್ಕೆ ಪಾರವಿರಲಿಲ್ಲ. ರಾಜನೂ ಕೃಷ್ಣಶಾಸ್ತ್ರಿಯನ್ನು ಇಂತಹ ಪರೀಕ್ಷೆಗೆ ಗುರಿಪಡಿಸಿದುದಕ್ಕೆ ಕ್ಷಮೆ ಕೇಳಿಕೊಂಡನು.

ತರುವಾಯ ಒಂದು ವಾರ ತಿರುಗುವುದಕ್ಕೆ ಮೊದಲೇ ಅವನು ಕೃಷ್ಣಶಾಸ್ತ್ರಿಯನ್ನು ಘನವಾಗಿ ಸನ್ಮಾನಿಸಿ, ತನ್ನ ಆಸ್ಥಾನದಲ್ಲಿ ಸಾಮುದ್ರಿಕ ಶಾಸ್ತ್ರ ಪಂಡಿತನಾಗಿ ನಿಯಮಿಸಿಕೊಂಡನು.





# ಕಳ್ಳನಿಗೆ ಕಾಣಿಕೆ

**ಒಂ**ದು ಸಾರಿ ಮಾನಲ್ ಸುಲ್ತಾನನು ರಾಜ್ಯ ದೊಳಗೆ ಪರ್ಯಟನೆ ಮಾಡುತ್ತ, ಒಂದು ದಿನ ರಾತ್ರಿ ಚಿಕ್ಕದೊಂದು ಪಟ್ಟಣದಲ್ಲಿ ಬಿಡದಿ ಮಾಡಿ ಕೊಂಡನು. ರಾತ್ರಿ ಹೋಗಿ ಬೆಳಗಾಗುತ್ತಾ ಬರು ವಾಗ, ಬಿಡದಿಯಲ್ಲಿ ಏನೋ ದೊಡ್ಡ ಗಲಾಟೆ ಯಾಗುವ ಸದ್ದು ಹೊರಟಿತು. ಸುಲ್ತಾನನ ಪರಿವಾರ ದಲ್ಲಿ ಒಬ್ಬನಿಗೆ ಸುಲ್ತಾನನು ಮಲಗಿದ ಕೋಣೆಯ ಪ್ರಾಂತದಲ್ಲಿ ಕಳ್ಳನೊಬ್ಬನು ಕಾಣಿಸಿ, ಮರುಕ್ಷಣದಲ್ಲೇ ತಪ್ಪಿಸಿಕೊಂಡು ಓಡಿಹೋದನು. ಸುತ್ತುಮುತ್ತಲೂ ಅವನನ್ನು ಹುಡುಕುವ ಗದ್ದಲವದು.

ಎಷ್ಟು ಹುಡುಕಿದರೂ ಭವನದೊಳಗೆಲ್ಲಿಯೂ ಕಳ್ಳನ ಜಾಡು ಕಾಣಲಿಲ್ಲ. ಕಡೆಗೆ ಸೂರ್ಯೋದಯ ವಾದುದರಿಂದ ಅಕ್ಕಪಕ್ಕದಲ್ಲಿರುವ ಅನೇಕ ಮನೆ ಯವರು ಕಳ್ಳನ ಸಮಾಚಾರ ತಿಳಿದು ಅಲ್ಲಿಗೆ ಬಂದು ಗುಂಪುಗೂಡಿದರು.

ಸುಲ್ತಾನನಿಗೆ ಬಹಳ ಕೋಪ ಬಂದಿತು. ಅವನ ನೆಮ್ಮದಿಯೂ ಶಾಂತಿಯೂ ಪೂರ್ತಿ ಕದಡಿತ್ತು. ಅವನಿಗೆ ಕೂಡಲೇ ಅಲ್ಲಿಂದ ಹೊರಟು ರಾಜ ಧಾನಿಗೆ ಸೇರಲೇಬೇಕಾಗಿತ್ತು.

ಇದ್ದಕ್ಕಿದ್ದ ಹಾಗೆ ಒಂದು ಕೋಣೆಯ ಮೂಲೆ ಯಲ್ಲಿ ಯಾರೋ ಸೀನಿದ ಸದ್ದು ಬಹು ದೊಡ್ಡ ದಾಗಿ ಕೇಳಿಸಿತು. ಸೈನಿಕೋದ್ಯೋಗಿಗಳು ಅಲ್ಲಿಗೆ ಓಡಿದರು. ಕೋಣೆಯ ಮೂಲೆಯಲ್ಲಿ ಗುಡಾರದ ಆಚ್ಛಾದನೆಗೆ ಉಪಯೋಗಿಸುವ ವಸ್ತ್ರಗಳ ಸುರುಳಿ ಯೊಂದು ಬಿದ್ದಿತ್ತು. ಕಳ್ಳ ಆ ಬಟ್ಟೆಯ ಸುರುಳಿಯ ನಡುವೆ ಅಡಗಿಕೊಂಡಿದ್ದನು.

ಸೈನಿಕರು ಅವನನ್ನು ಬಟ್ಟೆಗಳ ಮಧ್ಯದಿಂದ ಎತ್ತಿ ಹೊಡೆಯಲು ನೋಡುವಾಗ ಅವನು ಕೈಗಳನ್ನೆತ್ತಿ, " ಅಯ್ಯಾ, ಸ್ವಲ್ಪ ನಿಧಾನಿಸಿರಿ. ನಾನು ಸುಲ್ತಾನ ರೊಂದಿಗೆ ರಹಸ್ಯವಾಗಿ ಮಾತಾಡಬೇಕಾದ ವಿಷಯ ವೊಂದಿದೆ " ಎಂದನು.

ಒಬ್ಬ ಸೈನಿಕನು ಸುಲ್ತಾನನ ಬಳಿಗೆ ಹೋಗಿ, " ಪ್ರಭೂ, ಕಳ್ಳ ಸಿಕ್ಕಿದ್ದಾನೆ. ಅವನ ಸೀನಿನಿಂದಾಗಿ ಅವನು ಸಿಕ್ಕಿಬಿದ್ದನು. ಆದರೆ ಅವನು ತಮ್ಮೊಂದಿಗೆ ಏನೋ ರಹಸ್ಯ ಮಾತಾಡಬೇಕೆಂದು ಹೇಳುತ್ತಾನೆ. ಏನು ಅಪ್ಪಣೆ ? " ಎಂದನು.

" ಕಳ್ಳನಿಗೆ ನನ್ನ ಹತ್ತಿರ ರಹಸ್ಯದ ಮಾತೆ ? " ಎಂದು ಸುಲ್ತಾನನು ಆಶ್ಚರ್ಯ ವ್ಯಕ್ತಪಡಿಸಿ,

ಅರೇಬಿಯಾ ಕಥೆ

"ಇವನಾವನೋ ಚಿಲ್ಲರೆ ಜಾತಿಯ ಕನ್ನದ ಕಳ್ಳನಾಗಿರಬೇಕು. ಅವನು ಏನು ಹೇಳುವನೋ ಕೇಳೋಣ. ಬರಲಿ" ಎಂದನು.

ಕಳ್ಳ ಸುಲ್ತಾನನ ಬಳಿಗೆ ಬಂದು ಕೈ ಮುಗಿದು, "ಪ್ರಭೂ, ತಾವು ನನ್ನನ್ನು ಬಹಳ ಚೆನ್ನಾಗಿ ಸತ್ಕಾರ ಮಾಡಬೇಕಾಗಿದೆ. ಆದರೆ ನಿಮ್ಮ ಉದ್ಯೋಗಸ್ಥರು ಹಾಗೆ ಮಾಡುವುದನ್ನು ಬಿಟ್ಟು ನನ್ನನ್ನು ಹೊಡೆಯಲು ನೋಡುತ್ತಾರೆ" ಎಂದನು.

"ಏನು ಹೇಳುವೆ ನೀನು ? ನಿನ್ನನ್ನು ಸತ್ಕರಿಸುವುದೆ ? ಏಕೆ ? ನಮ್ಮನ್ನು ಯಾರೆಂದುಕೊಂಡೆ ?" ಎಂದನು ಸುಲ್ತಾನ ಕೋಪದಿಂದ.

"ಅಯ್ಯಾ ! ಕಣ್ಣಿಗೆ ಕಂಡ ಕಳ್ಳ ಹೊರಗೆ ಓಡಿ ಹೋಗಲಿಲ್ಲವೆಂದೂ, ಭವನದೊಳಗೆಲ್ಲಿಯೋ ಅಡಗಿಕೊಂಡಿರುವನೆಂದೂ ಎಲ್ಲರೂ ಅಂದುಕೊಂಡಿರುವ ಸಂಗತಿ. ನಿಮ್ಮ ಪರಿವಾರದವರು ನನ್ನನ್ನು ಹುಡುಕಿ ಇನ್ನು ನಾನು ದೊರಕಲಾರೆನೆಂದು ಆಶೆ ಬಿಟ್ಟಿದ್ದಾರೆ. ನೀವು ರಾಜಧಾನಿಗೆ ಪ್ರಯಾಣ ಮಾಡಲಿದ್ದೀರಿ. ಇಲ್ಲಿ ನಡೆದ ಗೊಡವೆ ನೋಡಲು ಅನೇಕ ಮಂದಿ ಬಂದು ಕೂಡಿದ್ದಾರೆ. ಅವರು ನಿಮ್ಮ ಸೈನಿಕೋದ್ಯೋಗಸ್ಥರ ಬುದ್ಧಿವಂತಿಕೆ, ಶಕ್ತಿಸಾಮರ್ಥ್ಯಗಳನ್ನು ಕುರಿತು ಏನಂದುಕೊಂಡಾರು ?" ಎಂದು ನಿಲ್ಲಿಸಿ ಉಸಿರುಬಿಟ್ಟನು ಕಳ್ಳ.

ಮುಂದೆ ಹೇಳುವಂತೆ ಬೇಸರದಿಂದ ಸುಲ್ತಾನನು ಕೈಸನ್ನೆ ಮಾಡುತ್ತ ತಲೆಯಾಡಿಸಿದನು.

"ಕಳ್ಳನು ಹೊರಗೆ ಹೋಗಲಿಲ್ಲವೆಂದೂ ಭವನದೊಳಗೇ ಎಲ್ಲಿಯೋ ಅಡಗಿಕೊಂಡಿರುವನೆಂದೂ ಎಲ್ಲರೂ ಅಂದುಕೊಂಡ ಮಾತು. ಅಂತಹ ಸುಲಭದವನನ್ನು ಸಹಾ ನಿಮ್ಮ ಸೈನಿಕರಿಂದ ಹಿಡಿಯಲಾಗದೆ ಹೋದರೆ, ಜನರ ದೃಷ್ಟಿಯಲ್ಲಿ ಅವರೆಲ್ಲ ಕೀಳ್ಮಟ್ಟಕ್ಕಿಳಿಯುತ್ತಾರಷ್ಟೆ ? ಹಾಗಾಗದೆ ಅವರ ಮರ್ಯಾದೆ ಉಳಿಸಬೇಕೆಂತಲೇ ನಾನು ಅಷ್ಟು ಗಟ್ಟಿಯಾಗಿ ಸೀನಿದೆ. ನನ್ನ ಪ್ರಾಣಕ್ಕಿಂತಲೂ ಪ್ರಭುಗಳಾದ ನಿಮ್ಮ ಗೌರವ ಮರ್ಯಾದೆಗಳೇ ನನಗೆ ಹೆಚ್ಚು ! ಅದಕ್ಕಾಗಿ ಸೀನಿಕೊಂಡು ನಾನಾಗಿಯೇ ಸಿಕ್ಕಿಬಿದ್ದೆ" ಎಂದನು ಕಳ್ಳ.

"ಹೌದೋ ಹೌದು ! ನಿಜ ನಿಜ !" ಎಂದು ಸುಲ್ತಾನನು ತಲೆಯಾಡಿಸಿ, ಜನರೆಲ್ಲಾ ನೋಡುತ್ತಿದ್ದಂತೆ ಅವನ ಕೈಗಳಿಗೆ ಸಂಕಲೆ ಹಾಕಿಸಿದನು.

ತರುವಾಯ ಸುಲ್ತಾನನು ಆ ಪಟ್ಟಣವನ್ನು ಬಿಟ್ಟು ರಾಜಧಾನಿಯ ದಾರಿ ಹಿಡಿದು ಸ್ವಲ್ಪದೂರ ಹೋದ ಮೇಲೆ, ಕಳ್ಳನ ಸಂಕಲೆಯನ್ನು ಬಿಚ್ಚಿಸಿ, ಸ್ವಲ್ಪ ಧನವನ್ನು ಕಾಣಿಕೆ ಕೊಟ್ಟು ಸ್ವೇಚ್ಛೆಯಾಗಿ ಹೋಗುವಂತೆ ಬಿಟ್ಟನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

### ಗೆದ್ದ ಶೀರ್ಷಿಕೆಗಳು ೧೯೮೪ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



P. R. Herle



S. B. Prasad

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಅಕ್ಟೋಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಹೂವಿನಂತೆ ಹರ್ಷ ಅರಳಿದೆ

ಎರಡನೇ ಫೋಟೋ : ಅದಿಲ್ಲಿ ಭಾರವಾದ ವೇಷದೊಳಗಿದೆ

ಕಳುಹಿಸಿದವರು : ಕೆ. ಜಿ. ಗಿರಿಜಾಬಾಯಿ, ವಲಸಲವಾಕಂ, ಮದರಾಸು ೮೭

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಹನ್ನೋಡ್ಮೊರಂಟ್. ೨. ಸೋವಿಯೆಟ್ ರಷ್ಯಾಕ್ಕೆ ಸೇರಿದ ಅಲೆಕ್ಸೀ ಎ. ಲಿಯೊನೋವ್. ೩. ನಾರ್ವೇಗೆ ಸೇರಿದ ರೋನಾಲ್ಡ್ ಅಮುಂಡ್ಸೆನ್. (೪ ಡಿಸೆಂಬರ್ ೧೯೧೧). ೪. ನಾರ್ವೇಗೆ ಸೇರಿದ ಟ್ರೈಗ್ವಿಲೀ. ೫. ಸ್ವಾಮಿ ವಿವೇಕಾನಂದ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor : NAGI REDDI.



"ಹನ್ನೊಂದು ವರ್ಷ
ವಯಸ್ಸಿನ ನನ್ನ ಪುಟ್ಟ
ಫೂಟ್‌ಬಾಲ್-ಆಟಗಾರ!
ಒಂದು ದಿನ ಜಗತ್ತಿನಲ್ಲಿಯೆ
ಅತ್ಯುತ್ತಮ ಫೋರ್ವರ್ಡ್
ಆಗ್ತಾನೆ, ಖಂಡಿತ!"

# ಬೋರ್ನ್‌ವಿಟಾ ವರ್ಷಗಳು

ಅದಕ್ಕಾಗಿ ಒಂದು ದಿನ ಅವರು ನಿಮ್ಮ ಉಪಕಾರ ಸ್ಮರಣೆ ಮಾಡುವರು.

ಬೆಳೆಯುವ ಮಕ್ಕಳು ಬೇರೆ ಎಲ್ಲ ಮಾಲ್ಟ್‌ಯುಕ್ತ ಪೇಯಗಳನ್ನು ಬಿಟ್ಟು ಬೋರ್ನ್‌ವಿಟಾ ಕುಡಿಯಲು ಏಕೆ ಇಷ್ಟಪಡುತ್ತಾರೆ? ತಮ್ಮ ಮಕ್ಕಳಿಗೆ ಬೋರ್ನ್‌ವಿಟಾ ಹೊರತು ಬೇರಾವುದೂ ಸಲ್ಲದೆಂದು ಎರಡು ತಲೆಮಾರುಗಳ ತಂದೆತಾಯಿಗಳು ಸಾಧಿಸುತ್ತಿರಲು ಕಾರಣವೇನು?

ಅದರ ಚಾಕಲೇಟಿನ ರುಚಿಯಷ್ಟೇ ಅಲ್ಲ. ಕ್ಯಾಡ್‌ಬರಿಸ್ ಹೆಸರು ಕೂಡ ಅಲ್ಲ — ಅದಕ್ಕಿಂತ ಹೆಚ್ಚಿನದು, ಎಷ್ಟೋ ಹೆಚ್ಚಿನದು, ಅದು ಬೋರ್ನ್‌ವಿಟಾ. ಬೆಳೆದುಕೊಂಡು ಬರುವಾಗ ಕುಡಿಯಬೇಕಾದ ಪೇಯ.

**ಕ್ಯಾಡ್‌ಬರಿಸ್**
**ಬೋರ್ನ್‌ವಿಟಾ**

ಬಾಲರ ಪೋಷಣೆ ಸರಿಯಾಗಿ ಮಾಡಿರಿ.
ಮಕ್ಕಳಿಗೆ ಬೋರ್ನ್‌ವಿಟಾ ಕೊಡಿರಿ.

1 ಕಿಲೋ ಪ್ಯಾಕ್‌ನಲ್ಲೂ ಸಿಗುತ್ತದೆ. ಇದರೊಳಗೆ ಇದೆ — ಉಚಿತ ಮಗ್.






## ೧೭

[ ಪದ್ಮಪಾದನು ಪಿಂಗಳನಿಗೆ, ಮರುಭೂಮಿಯ ಕಳ್ಳರು ವರ್ತಕರನ್ನೆಲ್ಲ ಬಂಧಿಸಿದ ಗುಹೆಯನ್ನು ತೋರಿಸಿದನು. ಹಸನ್‌ಗೋರೀ ಸೈನಿಕರೊಂದಿಗೆ ಹೋಗಿ ವರ್ತಕರನ್ನು ಬಂಧಮುಕ್ತ ಮಾಡಿಸಿದನು. ಆಗ ಪಿಂಗಳನ ಅಪೇಕ್ಷೆಯಂತೆ ಪದ್ಮಪಾದನು ತನ್ನ ಮಂತ್ರಶಕ್ತಿಯಿಂದ ತೋಳಗಳನ್ನೂ ಹೆಬ್ಬುಲಿಗಳನ್ನೂ ಸೃಷ್ಟಿಸಿ, ಅವುಗಳಿಂದ ಮರುಭೂಮಿಯ ಕಳ್ಳರನ್ನೆಲ್ಲಾ ಅಡ್ಡಗಟ್ಟಿಸಿ ಮುತ್ತಿಸಿ, ತಾನಿರುವಲ್ಲಿಗೆ ಬರಮಾಡಿಕೊಂಡನು.]

**ಯಾ**ರಿಗೂ ಅಂಜದೆ, ಎಲ್ಲರನ್ನೂ ಅಂಜಿಸುವ ಮರುಭೂಮಿಯ ಕಳ್ಳರಾದ ಹೆಗ್ಗಡೇಗೆಯ ಗುಂಪಿನವರು, ಪ್ರಾಣಭೀತಿಯಿಂದ ಗೋಳಾಡುತ್ತಾ, ಆಯುಷ್ಯ ತೀರಿದವರು ಯಮನ ಬಳಿಗೇ ಓಡುವಂತೆ ತಮ್ಮ ಹತ್ತಿರ ಬರುವುದನ್ನು ನೋಡಿ ಹಸನ್‌ಗೋರಿ ನಗುತ್ತ, ತನ್ನ ವಿಜಯವನ್ನು ಸೂಚಿಸಿದನು. ಎಷ್ಟೋ ವರ್ಷಗಳಿಂದ ಈ ಪ್ರಾಂತದಲ್ಲಿ ಪ್ರಯಾಣ ಮಾಡುವ ವರ್ತಕರನ್ನು ದೋಚಿಕೊಂಡೇ ಬರುತ್ತಿದ್ದ ಈ ಕಳ್ಳ ಖದೀಮರೆಲ್ಲ ಇಷ್ಟೊಂದು ಸುಲಭವಾಗಿ ಸಿಗುವರೆಂದು ಅವನೆಂದೂ ಊಹಿಸಿರಲಿಲ್ಲ. ಈಗ ತನ್ನ ಪ್ರಯತ್ನವೇನಿಲ್ಲದೆ ಯಾವನಿಂದಲೋ ವಿಜಯವಾದರೂ, ಅವನಿಗಾಗುವ ಆನಂದಕ್ಕೆ ಮೇರೆ ಇಲ್ಲ.

ಈ ಘನ ವಿಜಯಕ್ಕೆ ಕಾರಣನಾದವನು ಮಹಾ ಮಾಂತ್ರಿಕ ಪದ್ಮಪಾದನಾದರೂ, ನವಾಬನು ತನ್ನನ್ನು ತಪ್ಪದೆ ಬಹು ದೊಡ್ಡ ರೀತಿಯಲ್ಲಿ ಬಹುಮಾನಿಸುವನೆಂದು ಹಸನ್‌ಗೋರೀ ಭಾವಿಸಿಕೊಂಡನು. ಈ ಸಂತೋಷದ ಉಕ್ಕುವಿಕೆಯಲ್ಲಿ ಅವನು ಪದ್ಮಪಾದನನ್ನು ನೋಡಿ, “ ಅಯ್ಯಾ ! ಪದ್ಮಪಾದರೇ ! ನಿಮ್ಮ ಶಕ್ತಿಗೆ ಸಾಟಿಯೇ ಇಲ್ಲ. ಈ ಕ್ರೂರ ಕರ್ಮಿಗಳನ್ನು ಹಿಡಿಯಲು ನಾನು ಅನೇಕ ವರ್ಷಗಳಿಂದ ಪ್ರಯತ್ನ

ಪಡುತ್ತಿದ್ದನು. ಇವರಿಂದ ಅನೇಕ ಸೈನಿಕರು ಸತ್ತರು. ಈ ದಿನ ನಿಮ್ಮ ಸಹಾಯದಿಂದ ಕ್ಷಣಮಾತ್ರದಲ್ಲಿ ಅದ್ಭುತ ರೀತಿಯಲ್ಲಿ ಕ್ರೂರರೆಲ್ಲರ ಬಂಧನವಾಯಿತು. ಇನ್ನು ಈ ಮರುಭೂಮಿಯ ದಾರಿ ವರ್ತಕರಿಗೂ ಯಾತ್ರಿಕರಿಗೂ ನಿರ್ಭಯದ ದಾರಿಯಾಗುತ್ತದೆ. ನಿಮ್ಮ ದಯೆಗೆ, ಉಪಕಾರಕ್ಕೆ ಎಂದೆಂದೂ ಕೃತಜ್ಞನಾಗಿರುತ್ತೇನೆ" ಎಂದನು.

ಪದ್ಮಪಾದನು ಮುಗುಳುನಗು ತೋರಿಸಿ, "ಹಸನ್‌ಗೋರಿ ! ನಾನು ಮಾಡಲಿಕ್ಕೆ ಸಾಧ್ಯವಾಗುವ ಸಹಾಯವನ್ನೇನೋ ಮಾಡಿದ್ದೇನೆ. ನನ್ನ ಸಂಗತಿ ಪ್ರಕಟವಾಗುವುದು ನನಗಿಷ್ಟವಿಲ್ಲ. ಇನ್ನು ಈ ಕಳ್ಳರನ್ನೆಲ್ಲಾ ವಿಚಾರಣೆಗೆ ಗುರಿಪಡಿಸಿ ಶಿಕ್ಷಿಸಬೇಕಾದುದು ನಿಮ್ಮ ಹೊಣೆ. ಈಗ ನಾನು ನನ್ನ ಹೆಬ್ಬುಲಿಗಳನ್ನೂ ತೋಳಗಳನ್ನೂ ಕಳುಹಿಸಿಬಿಡುತ್ತೇನೆ" ಎಂದು ಹೇಳಿ ಎರಡು ಕೈಗಳನ್ನೂ ಮೇಲಕ್ಕೆತ್ತಿ ಏನೋ ಮಂತ್ರವನ್ನು ಪಠಿಸಿದನು. ಇದ್ದಕ್ಕಿದ್ದ ಹಾಗೆ ತೋಳಗಳೂ ಹೆಬ್ಬುಲಿಗಳೂ ಮಾಯವಾಗಿ ಹೋದುವು. ಆಗ ಪದ್ಮಪಾದನ ಕೈಯೊಳಗೆ ಅನೇಕ ಕಲ್ಲುಗಳು ಬಂದು ಸೇರಿದುವು. ಅವುಗಳನ್ನು ಹಸನ್‌ಗೋರಿಗೂ ಪಿಂಗಳನಿಗೂ ತೋರಿಸಿ, "ಇವೇ ತೋಳಗಳು ! ಹೆಬ್ಬುಲಿಗಳು !" ಎನ್ನುತ್ತ ಅವುಗಳನ್ನು ದೂರ ಬೀಸಿ ಒಗೆದನು.

ಹಸನ್‌ಗೋರೀ ಆಜ್ಞೆ ಮಾಡಿದ ಕೂಡಲೇ ಅವನ ಸೈನಿಕರು ಮೊದಲು ಕಳ್ಳರ ನಾಯಕನಾದ ಹೆಗ್ಗಡೇಗೆ ಸಂಕಲೆಗಳನ್ನು ತಗಲಿಸಿ, ಆಮೇಲೆ ಅವನ ಅನುಚರರೆಲ್ಲರನ್ನೂ ಹಗ್ಗಗಳಿಂದ ಒಬ್ಬರೊಡನೆ ಒಬ್ಬರನ್ನು ಜೋಡಿಸಿ ಒಂದಾಗಿ ಬಿಗಿಸಿ ಕಟ್ಟಿಸಿದನು.

ಆ ಸಮಯದಲ್ಲಿ ಪದ್ಮಪಾದನು ಪಿಂಗಳನನ್ನು ಸ್ವಲ್ಪ ಆಚೆಗೆ ಕರೆದುಕೊಂಡು ಹೋಗಿ, "ಪಿಂಗಳಾ, ತಿಳಿಯದಂತೆಯೇ ಇಲ್ಲಿ ಸೇರಿದ ನಿನಗೆ ಇವರೊಂದಿಗಿರಲು ಇಷ್ಟವಿರಲಿಕ್ಕಿಲ್ಲ. ಬೇಗನೇ ಅವಂತಿ ನಗರಕ್ಕೆ ಹೋಗಬೇಕೆಂದಿದ್ದೀತು, ನಿಜತಾನೆ ?" ಎಂದು ಕೇಳಿದನು. "ಹೌದು ಪದ್ಮಪಾದರೇ, ಮಹಾ ದುಷ್ಟರಾದ



ನನ್ನ ಅಣ್ಣಂದಿರು ನನ್ನನ್ನು ಹಡಗಿನ ಸರಂಗನಿಗೆ ಮಾರಿದ ಮೇಲೆ, ನಮ್ಮ ಅಮ್ಮನನ್ನು ನಾನಾ ಹಿಂಸೆಗಳಿಗೆ ಗುರಿಪಡಿಸಿದ್ದಾರು. ಈ ಮೊದಲು ಅವರು ಹಾಗೆಯೇ ಮಾಡಿದ್ದಾರೆ. ಅವರಿಗೆ ಹಡೆದ ತಾಯಿಯ ಮೇಲೆ ಕೂಡಾ ಪ್ರೀತಿ ಇಲ್ಲ. ಮಮತೆ ಇಲ್ಲ!" ಎಂದನು ಪಿಂಗಳ.

"ನಿನ್ನ ಈ ಎಲ್ಲಾ ಕಷ್ಟಗಳಿಗೂ ಕಾರಣ ನೀನು ಭಲ್ಲೂಕಕೇತು ಆವಾಹನೆಯ ಮಂತ್ರವನ್ನು ಮರೆತದ್ದೇ. ಇಕೋ, ಆ ಮಂತ್ರವನ್ನು ನಾನು ನೆನಪುಮಾಡಿ ಕೊಡುತ್ತೇನೆ. ಇನ್ನು ಮೇಲೆ ಮರೆಯಬೇಡ. ಅದು ನಿನಗೆ ಯಾವಾಗಲೂ ಕ್ಷೇಮವಾಗಿರುತ್ತದೆ" ಎಂದು ಪದ್ಮಪಾದನು ಆ ಮಂತ್ರವನ್ನು ಅವನಿಗೆ ಹೇಳಿದನು. ಈಗ ಅದು ಚೆನ್ನಾಗಿ ಪಿಂಗಳನ ನೆನಪಿನಲ್ಲಿ ಉಳಿಯುವಂತಾಯಿತು. ಆಮೇಲೆ ಪದ್ಮಪಾದನು ತನ್ನ ಕಿರುಬೆರಳಿನ ಒಂದು ಉಂಗುರವನ್ನು ಪಿಂಗಳನಿಗೆ ಕೊಟ್ಟು, "ಈ ಉಂಗುರವನ್ನು ಜಾಗರೂಕತೆಯಿಂದ ಕಾಪಾಡಿಕೊಂಡಿರು. ನಿನಗೆ ಎಂದಾದರೂ ಸರಿಯೆ, ನನ್ನನ್ನು ನೋಡಬೇಕೆಂದು ಕಾಣುವಾಗ, ಮನಸ್ಸಿನಲ್ಲಿ ನನ್ನನ್ನು ನೆನೆಯುತ್ತ ಈ ಉಂಗುರವನ್ನು ಮುಟ್ಟಿದರೆ ಸಾಕು; ನಾನು ನಿನ್ನ ಮುಂದೆ ಬಂದು ನಿಲ್ಲುತ್ತೇನೆ" ಎಂದನು.

"ಪದ್ಮಪಾದರೇ! ನಿಮ್ಮ ಮೇಲು ಎಂದೆಂದೂ ಮರೆಯಲಾಗದಂಥಾದ್ದು. ನಿಮ್ಮ ಸಹಾಯದಿಂದ ತಿರುಗಿ ನಾನು ನನ್ನ ಹೆತ್ತಮ್ಮನನ್ನು ನೋಡಲಿದ್ದೇನೆ. ನೀವು ಕೂಡಾ ನನ್ನೊಂದಿಗೆ ಅವಂತಿ ನಗರಕ್ಕೆ ಬರುವಿರಾ? ನಿಮ್ಮನ್ನು ನೋಡಿದರೆ ಅಮ್ಮನಿಗೆ ಬಹಳ ಸಂತೋಷವಾಗುತ್ತದೆ. ದಯಮಾಡಬೇಕು" ಎಂದನು ಪಿಂಗಳ.

ಪದ್ಮಪಾದನು ಪಿಂಗಳನನ್ನು ವಾತ್ಸಲ್ಯದಿಂದ ನೋಡುತ್ತ, "ಪಿಂಗಳಾ, ನೀನು ಮಾಡಿದ ಉಪಕಾರವನ್ನು ನಾನು ಮಾತ್ರ ಹೇಗೆ ಮರೆತುಹೋಗಲು ಸಾಧ್ಯ? ನಿನ್ನ ಸಹಾಯದಿಂದ ತಾನೇ ನಾನು ಮಹಾ ಮಾಯನ ವಸ್ತುಗಳನ್ನು ಜಯಿಸಿಕೊಳ್ಳಲು ಸಾಧ್ಯವಾಯಿತು? ಆದ್ದರಿಂದ ಎಂದೋ ಒಂದು





ದಿನ ನಾನು ನಿನ್ನ ಮನೆಗೆ ಅತಿಥಿಯಾಗಿ ಬಂದು, ನಿನ್ನ ತಾಯಿಯ ದರ್ಶನ ಮಾಡಿಕೊಳ್ಳುತ್ತೇನೆ. ಪ್ರಸ್ತುತ ನಾನು ಈ ವರ್ತಕರನ್ನೆಲ್ಲ ಬಿಟ್ಟು, ಒಂಟಿಯಾಗಿಯೇ ತೀರ್ಥಯಾತ್ರೆಗೆ ಹೋಗಬೇಕಾಗಿದೆ. ಹೊರಡುತ್ತೇನಪ್ಪಾ !" ಎಂದು ಹೇಳಿದ ಮರುಕ್ಷಣದಲ್ಲೇ ಪಿಂಗಳನ ಅನುಮತಿಗೂ ನಿಲ್ಲದೆ ಅವನು ಮಾಯವಾಗಿ ಹೋದನು.

ಪಿಂಗಳನು ಹಸನ್‌ಗೋರಿಯ ಹತ್ತಿರ ಹೋಗಿ, ತಾನಿನ್ನು ತನ್ನ ದೇಶಕ್ಕೆ ಹೋಗುತ್ತೇನೆಂದು ಅನುಮತಿ ಕೇಳಿದನು.

ಆ ಮಾತು ಕೇಳಿ ಹಸನ್‌ಗೋರೀ ಆಶ್ಚರ್ಯಪಡುತ್ತ, "ಪಿಂಗಳಾ ! ಅದೇನು ಹೇಳಿದಿ ನೀನು ? ಯಾವುದೋ ಪಕ್ಕದ ಊರಿಗೆ ಹೋಗುವ ಹಾಗೆ ಅಷ್ಟು ಹಗುರಾಗಿ ಹೇಳುವಿ ! ನಿನ್ನ ದೇಶ ಎಷ್ಟು ಸಾವಿರ ಮೈಲು ದೂರವೆಂದು ಗೊತ್ತಿದೆಯೇನು ? ದಿಕ್ಕಾದರೂ ಗೊತ್ತೆ ?" ಎಂದು ಕೇಳಿದನು.

ಪಿಂಗಳನು ಕಿರುನಗು ತೋರಿಸುತ್ತ, "ಹಸನ್ ಗೋರಿಯವರೇ, ಅದು ಎಷ್ಟು ದೂರವೋ, ಯಾವ ದಿಕ್ಕೋ ಅದೊಂದೂ ನನಗೆ ಗೊತ್ತಿಲ್ಲ. ಆದರೆ ನನಗಿರುವ ಶಕ್ತಿಸಾಮರ್ಥ್ಯ ಎಂತಹುದೆಂದು ನಿಮಗೂ ಗೊತ್ತಿಲ್ಲ. ದಯಮಾಡಿ ಅಲ್ಲಿ ಕಾಣುವ ಆ ಬಂಡೆಗಲ್ಲಿನ ಆಚೆಗೆ ನನ್ನೊಂದಿಗೆ ಬನ್ನಿರಿ. ನಿಮಗೆ ಒಬ್ಬ ಅದ್ಭುತ ವ್ಯಕ್ತಿಯ ದರ್ಶನ ಮಾಡಿಸುತ್ತೇನೆ. ನಿಮ್ಮ ಸೈನಿಕರೂ, ಮರುಭೂಮಿಯ ಕಳ್ಳರೂ ಅವನನ್ನು ನೋಡುವುದು ಒಳ್ಳೆಯದಲ್ಲ" ಎಂದು ದೊಡ್ಡದಾದೊಂದು ಬಂಡೆಯ ಕಡೆಗೆ ನಡೆದನು. ಕುತೂಹಲದಿಂದ ಹಸನ್‌ಗೋರಿಯೂ ಅವನನ್ನು ಅನುಸರಿಸಿ ಹೋದನು.

ಪಿಂಗಳನು ಮನಸ್ಸಿನಲ್ಲಿ ಭಲ್ಲೂಕಕೇತು ಮಂತ್ರವನ್ನು ಜಪಿಸಿದ್ದೇ ತಡ, ಭಲ್ಲೂಕಕೇತು ಅಲ್ಲಿ ಪ್ರತ್ಯಕ್ಷನಾಗಿ ಅವನ ಮುಂದೆ ಮಂಡಿಯೂರಿ, "ಪ್ರಭೂ ! ಏನಪ್ಪಣೆ ? ಬಹಳ ಕಾಲದಿಂದ ಈ ಸೇವಕನನ್ನು ಮರೆತುಬಿಟ್ಟಿರಿ, ಏಕೆ ?" ಎಂದನು ನೆಲ ನಡುಗುವ ಗಡಸು ದನಿಯಿಂದ.

ಭಲ್ಲೂಕಕೇತುವಿನ ಭಯಂಕರಾಕಾರವನ್ನು ನೋಡಿದ ಕೂಡಲೇ ಹಸನ್‌ಗೋರೀ ದೊಡ್ಡ ಕಂಠದಿಂದ ಕೂಗಿ ಅಲ್ಲಿಂದ ಓಡಿಹೋಗಲು ನೋಡಿದನು. ಪಿಂಗಳನು ಅವನ ಕೈಹಿಡಿದು ನಿಲ್ಲಿಸಿ, "ಹಸನ್, ನಿಮಗೆ ಇವನಿಂದ ಯಾವ ಭಯವೂ ಇಲ್ಲ. ಈ ಭಲ್ಲೂಕಕೇತು ನನ್ನ ವಿಧೇಯ ಸೇವಕ" ಎಂದನು.

"ಈ ಘೋರ ರಾಕ್ಷಸನು ನಿನ್ನ ಸೇವಕನೇ ?" ಎಂದು ಹಸನ್‌ಗೋರೀ ಮತ್ತಷ್ಟು ಬೆರಗಾದನು.

"ಹೌದು" ಎಂದು ಪಿಂಗಳನು ಭಲ್ಲೂಕಕೇತುವಿನ ಹೆಗಲ ಮೇಲೆ ಏರಿ ಕುಳಿತು, "ಅಯ್ಯಾ, ಹಸನ್ ಗೋರೀಯವರೇ ! ಹಸಿವೆ, ನೀರಡಿಕೆಯಿಂದ ಸಾಯಲಿರುವ ನನ್ನನ್ನು ನೀವು ರಕ್ಷಿಸಿದ್ದೀರಿ. ಅದನ್ನೆಂದೂ ಮರೆಯಲಾರೆ ! ಇನ್ನು ಅಪ್ಪಣೆ ಕೊಡಿರಿ !"

ಎಂದು ಕೈಮುಗಿದು, ಭಲ್ಲೂಕಕೇತುವಿನೊಂದಿಗೆ, "ಭಲ್ಲೂಕಕೇತೂ ! ನನ್ನನ್ನು ಅವಂತಿ ನಗರದೊಳಗಿನ ನನ್ನ ಮನೆಗೆ ಒಯ್ದುಬಿಡಪ್ಪಾ !" ಎಂದನು.

ಭಲ್ಲೂಕಕೇತು ಭೂಮಿ ನಡುಗುವಂತೆ ಒಂದು ಹೂಂಕಾರ ಮಾಡಿ, ಆಕಾಶಕ್ಕೇರಿ ಸಾಗತೊಡಗಿದನು. ಸಮುದ್ರಗಳನ್ನು, ನದಿಗಳನ್ನು, ಬೆಟ್ಟಗಳನ್ನು ದಾಟಿ ದಾಟಿ, ಸೂರ್ಯೋದಯದ ಹೊತ್ತಿಗೆ ಪಿಂಗಳನನ್ನು ಅವಂತೀ ನಗರದೊಳಗಿನ ಅವನ ಮನೆಯ ಸಮೀಪದಲ್ಲಿ ಕೆಳಗಿಳಿಸಿದನು. ಪಿಂಗಳನು ಜನ್ಮಭೂಮಿಗೆ ಅಡ್ಡಬಿದ್ದನು. ಶೀರಾ ಶಿಥಿಲಾವಸ್ಥೆಯಲ್ಲಿದ್ದ ಮನೆಯನ್ನು ನೋಡಿದ ಕೂಡಲೇ ಪಿಂಗಳನು ಗಾಬರಿಯಾಗಿ ನಿಂತನು. ಆಮೇಲೆ ತನ್ನ ಮನೆಯ ಬಾಗಿಲಿನ ಹತ್ತಿರ ಹೋದನು. ಅಲ್ಲಿ ಸೊರಗಿ ತೀರಾ ನಿತ್ರಾಣಳಾಗಿರುವ ತನ್ನ ತಾಯಿಯನ್ನು ನೋಡಿ ಅವನಿಗೆ ಹೊಟ್ಟೆ ಮಗುಚಿಕೊಂಡು ಬಂದಿತು. ಉಕ್ಕುವ ದುಃಖವನ್ನು ನುಂಗಿಕೊಳ್ಳುತ್ತಾ ಪಿಂಗಳನು "ಅಮ್ಮಾ !" ಎಂದು ಕೂಗಿ ತಾಯಿಯ ಹತ್ತಿರ ಕುಳಿತು ಅಪ್ಪಿಕೊಂಡನು.

ತಾಯಿ ಕ್ಷಣಕಾಲ ಬೆರಗಾಗಿ, ಕೂಡಲೇ ತನ್ನ ಕುಮಾರನ ಗುರುತು ಹಿಡಿದು, "ಮಗನೇ ! ನನ್ನ ಮುದ್ದು ಮಗನೇ ! ಕಣ್ಮಣಿ ಕಂದಾ ! ಪಿಂಗಳಾ ! ನೀನು ಬದುಕಿಯೇ ಇರುವೆಯಾ ? ಆಹಾ ! ನಾನೆಷ್ಟು ಅದೃಷ್ಟವಂತೆಯೋ !..." ಎಂದು ಅಳಲು ತೊಡಗಿದಳು.

ಪಿಂಗಳನು ತಾಯಿಯನ್ನು ಸಮಾಧಾನ ಪಡಿಸುತ್ತ, "ಅಮ್ಮಾ, ಇನ್ನು ನಮಗೆ ಯಾವ ಕಷ್ಟವೂ ಬರುವುದಿಲ್ಲ. ಹಾಳು ಮೂಳು ಬುದ್ಧಿಯ ಅಣ್ಣಂದಿರು ಎಲ್ಲಿದ್ದಾರೆ ಹೇಳು" ಎಂದು ಕೇಳಿದನು.

"ಅದನ್ನೇನು ಕೇಳುತ್ತೀಯಪ್ಪಾ ? ಅವರು ನಿನಗೆ ಮಾಡಿದ ದ್ರೋಹಕ್ಕೆ ಶಿಕ್ಷೆ ಅನುಭವಿಸಿಕೊಂಡಿದ್ದಾರೆ. ಅವರಿಬ್ಬರನ್ನೂ ರಾಜನು ಕಾರಾಗಾರದಲ್ಲಿ ಬಂಧಿಸಿ



ದ್ದಾನೆ. ಆ ಕತ್ತಲೆ ಕೋಣೆಯೊಳಗೆ ಕೈಕಾಲಾಡಿಸಲಾಗದೆ ನರಳಿಕೊಂಡಿದ್ದಾರೆ" ಎಂದಳು ತಾಯಿ.

"ಹಾಗಾದರೆ ನಿನಗೆ ಈ ದೀನ ಸ್ಥಿತಿ ಏಕೆ ? ನಾನು ಬಿಟ್ಟುಹೋದ ಧನವೂ, ಮಹತ್ವದ ಚೀಲವೂ ಇದೆಯಷ್ಟೆ ?" ಎಂದು ಕೇಳಿದನು ಪಿಂಗಳ.

ತಾಯಿ ಉಕ್ಕಿ ಬರುವ ದುಃಖವನ್ನು ನುಂಗಿಕೊಳ್ಳುತ್ತ, "ಅಪ್ಪಾ, ಅವುಗಳಿಗಾಗಿಯೇ ರಾಜನು ನಿನ್ನ ಅಣ್ಣಂದಿರನ್ನು ಕಾರಾಗೃಹದಲ್ಲಿ ಇಡಿಸಿದ್ದು..." ಎಂದು ಪಿಂಗಳನು ಹಡಗಿನವನಿಗೆ ಮಾರಲ್ಪಟ್ಟ ಮೇಲೆ, ಅಣ್ಣಂದಿರ ಪ್ರವರ್ತನೆಗಳನ್ನೆಲ್ಲಾ ಒಂದೊಂದಾಗಿ ಹೇಳಿದಳು. ಪಿಂಗಳನು ಕಟಕಟನೆ ಹಲ್ಲು ಕಡಿದನು. ಅವಳ ಮಾತನ್ನು ಕೇಳುತ್ತಿದ್ದಂತೆ ಪಿಂಗಳನು ಕೋಪದಿಂದ ನಡುಗತೊಡಗಿದನು.

"ಅಮ್ಮಾ ! ನಮ್ಮ ಅವಂತಿಯ ರಾಜ ಅಷ್ಟು ದುಷ್ಟನೇ ! ಅವನಿಗೆ ತಕ್ಕ ಪ್ರತೀಕಾರ ಮಾಡದೆ ಬಿಡಲಾರೆ !" ಎಂದು ಅವನು ಹೊರಗೆ ಹೋಗಿ

ಭಲ್ಲೂಕಕೇತುವನ್ನು ಕರೆದನು. ಅಲ್ಲೇ ಇದ್ದ ಭಲ್ಲೂಕಕೇತು, "ಪ್ರಭೂ! ಏನಪ್ಪಣೆ?" ಎಂದು ಅವನ ಮುಂದೆ ಕೈಕಟ್ಟಿ ನಿಂತನು.

"ಭಲ್ಲೂಕಕೇತೂ! ಈ ಅವಂತಿ ನಗರದ ರಾಜನು ನನ್ನ ಅಣ್ಣಂದಿರಿಬ್ಬರನ್ನು ಕಾರಾಗೃಹದಲ್ಲಿರಿಸಿದ್ದಾನೆ. ಅವರನ್ನು ಕೂಡಲೇ ಇಲ್ಲಿಗೆ ತರಬೇಕು. ಅಷ್ಟೇ ಅಲ್ಲ, ಆ ರಾಜನ ಕೋಶಾಗಾರದಲ್ಲಿರುವ ಧನವನ್ನು ಕೂಡಾ ಇಲ್ಲಿಗೆ ತಂದುಹಾಕಬೇಕು. ನಮ್ಮ ಮಹಿಮೆಯ ಚೀಲ ಕೂಡಾ ಅವನ ಹತ್ತಿರವಿದೆ, ಅದನ್ನು ಕೂಡಾ ಹುಡುಕಿ ತಂದುಬಿಡು" ಎಂದು ಅಪ್ಪಣೆ ಕೊಟ್ಟನು ಪಿಂಗಳ.

"ಅಪ್ಪಣೆ ಪ್ರಭೂ!" ಎಂದು ಭಲ್ಲೂಕಕೇತು ಮಾಯವಾಗಿ ಪಾತಾಳ ಮಾರ್ಗದಿಂದ ರಾಜಭವನದೊಳಗೆ ಸೇರಿ, ಧನಾಗಾರದೊಳಗಿದ್ದ ಪೂರ್ತಿ ಧನವನ್ನೂ, ಮಹತ್ವದ ಚೀಲವನ್ನೂ ತೆಗೆದುಕೊಂಡು, ಕಾರಾಗಾರದೊಳಗೆ ಹೋದನು.

ಭಯಂಕರ ರೂಪದ ಭಲ್ಲೂಕಕೇತುವನ್ನು ನೋಡಿದ ಕೂಡಲೇ ಪಿಂಗಳನ ಅಣ್ಣಂದಿರಾದ ಜೀವದತ್ತ, ಲಕ್ಷದತ್ತರು ಕಿಟ್ಟನೆ ಕಿರಿಚಿ, ಮೂರ್ಛೆ ಹೋದರು. ಭಲ್ಲೂಕಕೇತು ಅವರಿಬ್ಬರನ್ನೂ ಒಂದೊಂದು ಕಂಕುಳಿಗೆ ಅಂಟಿಸಿಕೊಂಡು, ಬೆಟ್ಟದಂಥ ಧನರಾಶಿಯನ್ನು ಬೆನ್ನ ಮೇಲೆ ಆಕರ್ಷಿಸಿ ಹೇರಿಕೊಂಡು, ಪಿಂಗಳನ ಹತ್ತಿರ ಬಂದು, "ಮಹಾಪ್ರಭು! ಇದೋ ನೀವು ಹೇಳಿದ್ದೆಲ್ಲವೂ ತಂದಿದ್ದೇನೆ. ಇವರೇ ನಿಮ್ಮ ಅಣ್ಣಂದಿರು!" ಎಂದು ತಂದುದನ್ನೆಲ್ಲಾ ಪಿಂಗಳನ ಮುಂದೆ ಇರಿಸಿದನು.

ಮೂರ್ಛೆ ಬಿದ್ದಿರುವ ಕುಮಾರರನ್ನು ನೋಡಿದ ಕೂಡಲೇ ತಾಯಿಯ ಮನಸ್ಸು ಪುತ್ರ ವಾತ್ಸಲ್ಯದಿಂದ ಕರಗಿಹೋಯಿತು. ಅವಳು ಅವರ ಮುಖಗಳಿಗೆ ನೀರು ಚಿಮುಕಿಸಿ "ಅಪ್ಪಗಳಿರಾ! ಜೀವೂ! ಲಕ್ಷೂ!..." ಎನ್ನುತ್ತ ಕರೆದಳು.




ಮೆಲ್ಲನೆ ಜೀವದತ್ತ, ಲಕ್ಷದತ್ತರು ಕಣ್ಣು ಬಿಡಿಸಿದರು. ಇದಿರಿನಲ್ಲಿ ಅವರಿಗೆ ತಾಯಿಯೂ ಪಿಂಗಳನೂ ಕಾಣಿಸಿದ ಕೂಡಲೇ, ಒಮ್ಮೆಗೇ ಅವರ ಪ್ರಾಣ ಹಾರುವ ಹಾಗಾಯಿತು. ಅವರಿಬ್ಬರೂ ಪಶ್ಚಾತ್ತಾಪದಿಂದ ಕುದಿಯುತ್ತ, "ಅಮ್ಮಾ! ಪಿಂಗಳಾ! ನಮ್ಮನ್ನು ಕ್ಷಮಿಸು! ಕ್ಷಮಿಸು. ಏನೂ ಮಾಡಬೇಡಿ! ನಮಗೆ ಸಾಕಾಗುವಷ್ಟು ಬುದ್ಧಿ ಬಂತಪ್ಪಾ ಬಂತು! ನಾವು ಮಾಡಿದ ಪಾಪಗಳಿಗೆ ಆ ಕಗ್ಗತ್ತಲೆಯಲ್ಲಿ ಪ್ರಾಯಶ್ಚಿತ್ತ ಅನುಭವಿಸಿದೆವು" ಎಂದರು. ಅವರ ದೀನ ಮುಖಗಳ ಮಾತುಗಳನ್ನು ಕೇಳಿ ಪಿಂಗಳನಿಗೆ ಕೂಡಾ ಅವರ ಮೇಲೆ ಕನಿಕರ ಒಸರತೊಡಗಿತು. ಆದರೂ ಅವನು ಅವರಿಬ್ಬರನ್ನೂ, ಕೋಪದಿಂದ ನೋಡುತ್ತ, "ನಿಮ್ಮಿಬ್ಬರಿಗಿಂತ ಹೆಚ್ಚಿನ ನೀಚರು, ದ್ರೋಹಿಗಳು ಲೋಕದಲ್ಲಿ ಬೇರೆ ಯಾರೂ ಇರಲಾರರು. ನಿಮ್ಮನ್ನು ಈ ಕ್ಷಣದಲ್ಲೇ ನನ್ನ ಸೇವಕ ಭಲ್ಲೂಕಕೇತುವಿನಿಂದ ಪಾತಾಳದಲ್ಲಿ

ಹುಗಿಸಿಬಿಡುತ್ತೇನೆ. ಏನೋ ಸಹೋದರರೆಂಬ ಪಾಶದಿಂದ, ಪುಣ್ಯವತಿಯಾದ ತಾಯಿಯ ಕರುಳಿನ ಅಂಶ ಸ್ವಲ್ಪವಾದರೂ ನಿಮ್ಮಲ್ಲಿದ್ದೀತೆಂಬ ಗೌರವದಿಂದ ಇದೊಂದು ಸಾರಿ ಮಾತ್ರ ನಿಮ್ಮನ್ನು ಕ್ಷಮಿಸುತ್ತೇನೆ. ಮುಂದೆ ನೀವು ಎಂದಾದರೂ ನನಗಾಗಲೀ, ಅಮ್ಮನಿಗಾಗಲೀ ದ್ರೋಹಕ್ಕೆ ತಲೆ ಹಾಕಿದಿರೋ, ನಿಮ್ಮನ್ನು ಚೂರು ಚೂರು ಮಾಡಿಸುತ್ತೇನೆ. ಇದು ನಿಜ !" ಎಂದನು.

"ಇಲ್ಲ ತಮ್ಮಾ, ಇಲ್ಲ. ನಮಗೆ ನಿಜಕ್ಕೂ ಬುದ್ಧಿ ಬಂದಿದೆ !" ಎಂದರು ಜೀವದತ್ತ ಲಕ್ಷದತ್ತರು ಏಕಕಂಠದಿಂದ.

ಪಿಂಗಳನು ಮಹಿಮೆಯ ಚೀಲವನ್ನು ತಾಯಿಗೆ ಕೊಡುತ್ತಾ, "ಊಟದ ಸಮಾಚಾರ ನೋಡಮ್ಮಾ !" ಎಂದನು. ಅಣ್ಣಂದಿರನ್ನು ಸ್ನಾನಮಾಡಿ ಬನ್ನಿರೆಂದು ಕಳುಹಿಸಿ, ಭಲ್ಲೂಕಕೇತುವನ್ನು ಕರೆದು "ಭಲ್ಲೂಕಕೇತೂ, ನದಿಯ ತೀರದಲ್ಲಿ ಕಾಣುವ ಆ ಮರಗಳ ಗುಂಪಿನಲ್ಲಿ, ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ನನಗೊಂದು ಒಳ್ಳೆಯ ಮನೆಯನ್ನು ಕಟ್ಟಿಸಿಬಿಡಬೇಕು. ಆ ಭವನವು ಎಲ್ಲ ವಿಧದಲ್ಲಿಯೂ ಅವಂತೀ ರಾಜಭವನವನ್ನು ಮಿಂಚಿ ಹೋಗುವಂತೆ ಕಾಣಬೇಕು. ಇದೇ ನೀನು ನನಗೆ ಮಾಡಬೇಕಾದ ದೊಡ್ಡ ಕೆಲಸ. ತಿಳಿಯಿತೆ ?" ಎಂದನು.

"ಅಪ್ಪಣೆ, ಪ್ರಭೂ ! ಭಲ್ಲೂಕ ಪರ್ವತಗಳಲ್ಲಿರುವ ನನ್ನ ಅನುಚರರಲ್ಲಿ ದೊಡ್ಡ ದೊಡ್ಡ ಶಿಲ್ಪಿಗಳಿದ್ದಾರೆ. ಕೋ ಅಂದರೆ ಕ್ಷಣಮಾತ್ರದಲ್ಲಿ ಬಂದುಬಿಡುತ್ತಾರೆ. ಈಗಲೇ ಕೆಲಸ ಪ್ರಾರಂಭ ಮಾಡಲು ಅಪ್ಪಣೆಯೆ ?" ಎಂದನು ಭಲ್ಲೂಕಕೇತು.

"ಹಗಲು ಹೊತ್ತಿನಲ್ಲಿ ನಿನ್ನ ರಾಕ್ಷಸ ಗಣಗಳೊಂದಿಗೆ ಇಲ್ಲಿ ಬಂದುಬಿಟ್ಟರೆ, ನಿಮ್ಮನ್ನೆಲ್ಲ ನೋಡಿ ಪ್ರಜೆಗಳೆಲ್ಲಾ ಜೀವಬಿಟ್ಟಾರು. ಈ ಅವಂತೀ ನಗರದಲ್ಲಿರಲು ಹಕ್ಕಿ, ಹರಿಣ ಕೂಡಾ ಹೆದರಿಯಾವು. ಪ್ರಜೆಗಳೆಲ್ಲಾ ನಗರ ಬಿಟ್ಟು ಓಡಿಹೋದ ಮೇಲೆ ನಾನು ಇಲ್ಲಿ ಹೇಗಿರಲಿ ? ಹಾಗೆಲ್ಲಾ ವಿಪರೀತವಾಗಬಾರದು. ಆದ್ದರಿಂದ ಸೂರ್ಯಾಸ್ತಮಾನವಾದ ಮೇಲೆ ರಾತ್ರಿಯಲ್ಲೇ ನಿನ್ನ ಕೆಲಸ ನಡೆಯಲಿ. ಬೆಳಗಾದ ಮೇಲೆ ಭವನದ ಹೊರತು ಭವನ ಕಟ್ಟಿದವರೊಬ್ಬರೂ ಇಲ್ಲೆಲ್ಲೂ ಇರಬಾರದು" ಎಂದನು ಪಿಂಗಳ.

"ಅಪ್ಪಣೆ ಪ್ರಭೋ ! ಭಲ್ಲೂಕ ಪರ್ವತಗಳಿಗೆ ಹೋಗಿ, ನನ್ನ ಅನುಚರರಿಗೆ ಈ ಸಂಗತಿಯನ್ನು ಹೇಳಿ, ಹೊತ್ತು ಮುಳುಗಿದ ಕೂಡಲೇ ಕೆಲಸವನ್ನು ಪ್ರಾರಂಭಿಸುತ್ತೇನೆ" ಎಂದು ಹೇಳಿ ಭಲ್ಲೂಕಕೇತು ಮಾಯವಾಗಿ ಹೋದನು.

(ಮುಂದಿನ ಸಂಚಿಕೆಯಲ್ಲಿ ಮುಕ್ತಾಯವಾಗುತ್ತದೆ)

